ಕನ್ನಡ ಪ್ರಾಥಮಿಕ ಶಾಲೆಗಳಲ್ಲಿಯ ೪ ನೆಯ,
೫ ನೆಯ, ೬ ನೆಯ, ೭ ನೆಯ ಇಯತ್ತೆಗಳ
ವಿದ್ಯಾರ್ಥಿಗಳಿಗೂ ವ್ಹರ್ನ್ಯಾಕ್ಯೂಲರ
ಫಾಯನಲ್ ಪರೀಕ್ಷೆಯ ಮತ್ತು
ಪ್ರವೇಶ ಪರೀಕ್ಷೆಯ ಉಮೇ
ದವಾರರಿಗೂ ಉಪಯೋಗ
ವಾಗಬೇಕೆಂಬಬಗ್ಗೆ
ತಯಾರಿಸಿದ

# ವ್ಯಾಪಾರ ಜಿನಸುಗಳ ಕಯ್ಗನ್ನಡಿ

ಮತ್ತು

# ಛಂದಸ್ಸಾರ ವರ್ಣದೀಪಿಕೆ.

ಇದನ್ನು
**ಹರಿ ಭಿಕಾಜಿ ಸಾವಂತ**
ಇವರು ತಮ್ಮ
"...ವ ಸಮಾಚಾರ" ಮುದ್ರಾಲಯದಲ್ಲಿ
ಮುದ್ರಿಸಿದರು.

...ದಲನೆಯ ಆವೃತ್ತಿ

...ಸನ್ ೧೯೧೨ ಇಸವಿ

ಕ್ರಯ ...

॥ ಶ್ರೀ ವಿರೂಪಾಕ್ಷಲಿಂಗ ಪ್ರಸನಃ ॥

# ವ್ಯಾಪಾರದ ಜೀನಸುಗಳ ಕವಿತೆಗಳು.



## ಏಶಿಯಾ ಖಂಡದೊಳಗಿನ ದೇಶಗಳು.




## ಶಾರ್ದೂಲವಿಕ್ರೀಡಿತವೃತ್ತ.

ಂದಂಪೂರಿತ ತುರ್ಕಿದೇಶಮರಬಸ್ತಾನಿಂಡಿಯಾ ಚೈನವುಂ ।
ಂದುಸ್ಥಾನ ಜಪಾನ ಸಿಂಹಳ ಬಲೂಚಿಸ್ತಾನಿರಾಣಂಗಳುಂ ॥
ಂದೊಂದೇ ಸಲೆಶೋಭಿಸುತ್ತಿರುವವೈ ಕೇಳೇಶಿಯಾ ಖಂಡದೊಳ್ ।
ೊಂದಿಕ್ಕುಂ ರಸಿಯಾಫಗಾಣ ಜನ ದೇಶಂತಳರ್ತರೀ ಚೀನಗಳ್ ॥ ೧ ॥

### ೧ ನೆಯ ಪಾಠ.

### ( ಏಶಿಯಾ ಖಂಡವು )

### ಬಲೂಚಿಸ್ತಾನ ದೇಶ.

ಕಂದ.

ಬಲುಚಿಸ್ತಾನದ ಜನವೊ ।
ಕ್ಕಲತನವಂ ನಡಿಸರವರು ಕುರಿದನಗಳುಮಂ ॥
ಸಲಹಿಪರೀಗೊಳ್ಳುಂಣೆಶೊ ।
ಗಲನು ತೆರಳಿ ಹಿಂದುದೇಶದೊಳ್ ಮಾರುವರೈ ॥ ೨ ॥

## ಅಫಗಾಣಿಸ್ತಾನ ದೇಶ.

(ಮತ್ತೇಭವಿಕ್ರೀಡಿತ ವೃತ್ತ.)

ದರಿಗಳ್ ಗುಡ್ಡಗಳಿರ್ಕ್ಕೆವಿೂಗಳಫಗಾಣಿಸ್ತಾನದೊಳ್ ಮಾ
ನವರ್ ।
ವರಪಂಜಾಬಕಿರಾಣ ತಾರ್ತರಿವಿದೇಶಂಗಳ್ಗೆ ವ್ಯಾಪಾರಕೆ ॥
ಭರದಿಂಶುಷ್ಕಫಲಾಶ್ವವಂಕಳುಪಿತಾವ್ ಪೇಳಿರ್ಪನೂಲ್ವಟ್ಟೆಯುಂ।
ತರಿಸರ್ ರಾಜನವಿೂರನೆಂಬ ಪೆಸರಿಂ ಪ್ರಖ್ಯಾತಿಯುಂಪೊಂ
ದುವಂ ॥ ೩ ॥

## ಇರಾಣ ದೇಶ.

(ಉತ್ಪಲಮಾಲಾವೃತ್ತ.)

ಮದ್ಯ ಸುಗಂಧ ತೈಲಫಲ ಕೇಶರ ಶಸ್ತ್ರ ವಿಭೂಷಣಂಗಳುಂ।
ಹೃದ್ಯಸಿತೋಪಲಂ ತೊಗಲು ರೇಶಿಮೆ ವಸ್ತ್ರಗಳುಣ್ಣೆ ಚೂ
ರಿಗಳ್ ॥
ಸದ್ಯದೆ ಕಾಜುವಚ್ಚರಳೆ ಮಣ್ಣಿನ ಪಾತ್ರೆಗಳಿಲ್ಲಿ ಪುಟ್ಟುಗುಂ।
ವಿದ್ಯೆಯುಮುಂಟು ಶ್ವಾನತುರಗಂಗಳಿರಾಣದೆ ಶ್ರೇಷ್ಠಮಿರ್ಪ
ವು ॥ ೪ ॥

## ಅರಬಸ್ತಾನ ದೇಶ.

ಕಂದ-

ಅರಬಸ್ತಾನದ ಮನುಜರ್।
ತಿರುಗುತ್ತುಂ ಜೀವಿಸುವರು ವ್ಯಾಪಾರಗರಂ ॥
ನೆರೆ ಸುಲಿಯುತ್ತುಂ ಬುಂದುಕು।
ದುರೆಮುತ್ತುಗಳಂಟು ಪೊಂಚಿಗಳ್ ಪುಟ್ಟುಗುಸುಂ ॥ ೫ ॥

## ಏಶಿಯಾಮೈನರ್.

ಕಂದ

ಹಲವು ತರದ ವಸ್ತ್ರಂಗಳ್ ।
ಫಲಧಾನ್ಯಂಗಳುಮೇಶಿಯಾಮೈನರದೊಳ್ ॥
ಬೆಲೆಯುಳ್ಳ ಶಾಲು ಮದ್ಯಂ ।
ಸಲೆದೊರೆಗುಂ ಲೋಹಚುಂಬಕಂಗಳು ತಾಮ್ರಂ ॥ ೬ ॥

## ಸಿರಿಯಾ, ಅರ್ಮೀನಿಯಾ, ತಾರ್ತರಿಗಳು.

(ಮತ್ತೇಭವಿಕ್ರೀಡಿತವೃತ್ತ)

ಸಿರಿಯಾದೊಳ್ ಸಬಕಾರ ಕಾಜು ಹವಳಂಗಳ್ ಸ್ಪಂಜತಂ ಚಾಕುಗಳ್ ।
ದೊರೆಗುಂಧಾನ್ಯಗಳಿಲ್ಲಿ ವಸ್ತ್ರಗಳುಮೇಸುಕ್ರಿಸ್ತನುಂಪುಟ್ಟಿದಂ ॥
ಕಿರಿದಾರ್ಮೀನಿಯ ಭಾಗದೊಳ್ ನಿಜದೆಕೆಸ್ನೊಲ್ವಟ್ಟೆಗಳ್ ಲೋಹಗಳ್ ।
ಪಿರಿದುಂಪುಟ್ಟುಗುಮಿತ್ತತಾರ್ತರಿಯೊಳಿಲ್ಲಂಯಾವದುಂಯಾವದುಂ ॥ ೭ ॥

## ಸೈಬೀರಿಯಾ.

ಕಂದ.

ಉರಲಾಲತಾಯಿಗಳೊಳುರೆ ।
ಜೊರೆಗುಂಪ್ಲಾಟಿನವು ಚಿನ್ನಬೆಳ್ಳಿಗಳೀಸ್ಸೈ ॥
ಬಿರಿಯುದೊಳಗೆ ಚಳಿಯತಿಶಯು ।
ಪಿರಿಪದು ಬೈಕಲ್ಲಸರವು ಮಹಿಯೊಳ್ ಪ್ರಥಿತಂ ॥ ೮ ॥

## ಜಪಾನ ದೇಶ.

ಕಂದ.

ಬೆಳೆಯುಳ್ಳ ಭೂಮಿಯಿರುತಿರ ।
ಲೊಳುಮಂಣಿನ ಪಾತ್ರೆ ಬಣ್ಣದೊಡವೆಗಳಸಿಗಳ್ ॥
ಪೊಳೆಮಿಸುನಿ ಬೆಳ್ಳಿ ತಾಮ್ರಂ ।
ಗಳಿವು ಜಪಾನದೊಳು ದೊರೆಗುಮಿದ್ದಲಿ ಖಣಿಗಳ್ ॥ ೯ ॥

## ಚೀನದೇಶ.

(ಉತ್ಪಲಮಾಲಾವೃತ್ತ.)

ಕಾಲುವೆಯಿಂದಮೊಕ್ಕಲತನಂ ನಡೆಗುಂಚಹವನ್ನು ಪ್ರೀತಿಪರ್ ।
ನೂಲಿನ ವಸ್ತ್ರ ರೇಶಿಮೆಯ ಘೂಚಹಸಕ್ಕರೆಗಳ್ ಸುಲೋಹ
ವಿಾ ॥
ಕಾಲವಿ ಚೀನಮಾನವರು ಮಂಣಿನ ಪಾತ್ರೆಯಮಾಳ್ಪರೀತಿ
ಯೊಳ್ ।
ಮೇಲಿಹರೆಲ್ಲದೇಶ ಜನರೊಳ್ ದೊರೆಗುಂಸಲೆ ಬೌದ್ಧ ಧಾರ್ಮಿ
ಕರ್ ॥ ೧೦ ॥

ಕಂದ.

ಮತಿವಂತರ್ ಸೂದ್ಯೋಗಿಗ ।
ಳತಿಚತುರರ್ ರೇಶಿಮೆಯನು ಮಾಡುವ ಕೃತಿಯೊಳ್ ॥
ನುತಚೀನಂಮಹಿಯೊಳ್‌ದಲ್ ।
ತೃತೀಯುಮಿಹುದಲ್ತೆಕ್ಷೇತ್ರಫಲವಾನದಿಕೇಳ್ ॥೧೧॥
ಆಟದ ಸಾಮಾನುಗಳುಂ ।
ನಾಟಿನ ವಸ್ತ್ರಗಳು ಸದ್ದು ಹೋಕಾಯಂತ್ರಂ ॥

ನೋಟಕ್ಕತಿರಮ್ಯಂಗಳ್ ।
ತೋಟಗಳುಂಟಲ್ಲಿ ಛಾಪಖಾನೆಗಳೀಗಳ್ ॥ ೧೨ ॥

## ಟಿಬೇಟ.

ಕಂದ.

ಕುರಿದನಗಳನ್ನು ರಕ್ಷಿಸಿ ।
ತಿರುಗುವರ್ಮೆ ಮೇವಿಗೆಂದು ಮಾನವರುಳಿದರ್ ॥
ಕುರಿಯುಣ್ಣೆಯಿಂದೆ ಶಾಲುಗ
ಳುರೆಪುಟ್ಟುಗುಮಲ್ಪಜನರು ಪೊಲದೊಳ್ ದುಡಿ
ವರ್ ॥ ೧೩ ॥

## ಮೊಂಗೋಲಿಯಾ.

( ಮತ್ತೇಭವಿಕ್ರೀಡಿತವೃತ್ತ )

ಕೆಲವರ್ ಸಾಗರತೀರದೊಳ್ ತಿಮಿಗಳಂ ಕೊಂಡೊಯ್ವರೀ ದೇಶದೊಳ್ ।
ಕೆಲವರ್ ಸತ್ಪಸಿಯೊಳ್ ಕೆಲರ್ ದುಡಿವರ್ಮೆ ಕ್ಷೇತ್ರಸ್ಥಕೃತ್ಯಂಗಳೊಳ್ ॥
ಕೆಲವರ್ ಡೇರೆಯೊಳಿರ್ದುದಲ್ ದನಗಳಂ ಕಾಪಾಡುವರ್ ಪ್ರೀತಿಯಿಂ ।
ಸಲೆಮೊಂಗೋಲಿಯದಲ್ಲಿ ರೇಶಿಮೆ ಚಹಂ ನೂಲ್ಪಟ್ಟೆಗಳ್ ಪುಟ್ಟುಗುಂ ॥ ೧೪ ।

## ಇಂಡಿಯನ್‌ಚೈನಾ ದೇಶ.

( ಉತ್ಪಲಮಾಲಾವೃತ್ತಂ. )

ಮಣ್ಣಿನ ಪಾತ್ರೆಯೊಂಟೆಗಳು ಕಾಜಿನ ಪಾತ್ರೆಗಳಿಲ್ಲಿ ವಸ್ತ್ರಗಳ್ ।

ಬಣ್ಣದ ವಸ್ತ್ರ ಲೋಹಗಳು ಪುಟ್ಟುವವೈ ಬನಗುಡ್ಡಗಳ್
ವಲಂ ॥
ಕಣ್ಣಿಗೆ ತೋರ್ಪುವೈ ನಡತೆಗಳ್ ಕೆಲವಂಶದೆ ಚೀನದಂತೆ
ವೊಲ್ ।
ಸಣ್ಣದಿಹಿಂಡಿಯನಾಚೆಯನಮಿಲ್ಲಿಯ ಮಾನವರೀಗಧೀ
ಯುತರ್ ॥ ೧೫ ॥

## ಸಿಂಹಳದ್ವೀಪ.

(ಉತ್ಪಲಮಾಲಾವೃತ್ತ.)

ಹತ್ತಿಯುನೀಲಿಕಬ್ಬು ತೊಲೆಕಬ್ಬಿಣಗಳ್ ಮೆಣಸಕ್ಕಿರನ್ನಗಳ್ ।
ಮುತ್ತೊಳುದಾಲಚಿನ್ನಿ ಸಲೆಬುಂದುವಿವೇದೊರೆಗುಂಸಿಲೋನ
ದೊಳ್ ॥
ಪುತ್ತುಗಳುಪ್ಪು ತೆಂಗುಗಳು ವೃಷ್ಟಿವಿಶೇಷಮಿದಾರುತಿಂಗಳುಂ
ಮುತ್ತುಗುಮೀಗಳುಂದರಿಗಳೊಳ್ ಬೆಳೆಬಪ್ಪುದು ತೋಟಪೊ
ಳವಲಂ ॥ ೧೬ ॥

## ಹಿಂದುಸ್ಥಾನ ದೇಶ.

ಕಂದ.

ಅರಳೆಣ್ಣೆ ಕಾಳುಗಳ್ ಸ
ಕ್ಕರೆ ಸೋರುಪ ಎಕ್ಕಿಗೋಧಿಯುಘುರೇಶಿಮೆಗಳ್ ॥
ವರಲವಣಂಬುಂದುಗಳುಂ
ಪರದೇಶಕೆ ಹಿಂದುದೇಶದಿಂದಂ ಪೋಕುಂ ॥ ೧೭ ॥

೨ ನೆಯ ಪಾಠ.

( ಯುರೋಪ ಖಂಡವು. )

## ಇಂಗ್ಲಂಡ ದೇಶ.

ಕಂದ.

ಇದ್ದಲಿ ಕಾಜು ತವರುಕ ।
ಲ್ಲಿದ್ದಲಿ ನೂಲುಕ್ಕುಯಂತ್ರ ಕಬ್ಬಿಣಗಳು ಮಿ ॥
ಲ್ಲಿದ್ದುಂಣೆಯುವಸ್ತ್ರಂಗಳ್ ।
ಸದ್ದಿಲ್ಲದೆ ಪೋಪುವಾಂಗ್ಲದಿಂಪರನಾಡಂ ॥ ೧ ॥

## ಸ್ಕಾಟಲಂಡ ದೇಶ.

ಈ ದೇಶದ ವ್ಯಾಪಾರವು ಇಂಗ್ಲಂಡದ ವ್ಯಾಪಾರದಂತೆಯೇ ನಡೆಯುವದು. ಆದುದರಿಂದ—

ಕಂದ.

ಇದ್ದಲಿ ಕಾಜು ತವರು ಕ ।
ಲ್ಲಿದ್ದಲಿ ನೂಲುಕ್ಕು ಯಂತ್ರ ಕಬ್ಬಿಣಗಳು ಮಿ
ಲ್ಲದ್ದುಂಣೆಯು ವಸ್ತ್ರಂಗಳ್
ಸದ್ದಿಲ್ಲದೆಪೋಕುಮತ್ತೆಸ್ಕಾಟಲಂಡ ದೇಶಕ್ಕೆ ॥ ೨ ॥

## ಅಯರ್ಲಂಡ ದೇಶ.

ಕಂದ.

ಸರಕುಗಳಿಲ್ಲಂ ಹವೆಹಿತ ।
ಕರವೊಕ್ಕಲತನವು ಖನಿಜಗಳ್ ಬಲುಸ್ವಲ್ಪಂ ॥
ಇರದೆ ಮಳೆ ಬೆಳ್ಸುದಗರಿಂ ।
ಬರುವದಯರ್ಲಂಡದಲ್ಲಿ ಹೊಲವೊಳ್ ಹುಲ್ಲೇ ॥ ೩ ॥

# ಫ್ರಾನ್ಸದೇಶ.

## ಮತ್ತೇಭವಿಕ್ರೀಡಿತ ವೃತ್ತ.

ಬಲುಸಂಪತ್ತಿಗಳುಳ್ಳ ದೇಶಮಿದುಸದ್ಧೀವಂತರುಂಮಾನವರ್ ।
ಸಲೆಸೂದ್ಯೋಗಿಗಳುಂ ನಿರಂತರ ಕಲಾಕೌಶಲ್ಯದೊಳ್ ಜಾಣ
ರುಂ ॥
ಫಲಭೂಷಂಗಳು ಮದ್ಯರೇಶಿಮೆಗಳುಂ ಕಾಜುಣ್ಣೆಗಳ್ ಬಟ್ಟೆ
ಗಳ್ ।
ಬಲವತ್ಫ್ರಾನ್ಸದೊಳುಂಶೆವಟ್ಟೆಗಳುದಲ್ ಸಾರ್ವಟ್ಟೆಗಳ್ ಪು
ಟ್ಟುಗುಂ ॥ ೪ ॥

# ಸ್ಪೇನ ದೇಶ.

## ( ಉತ್ಪಲಮಾಲಾವೃತ್ತ. )

ಕತ್ತಿಬದಾಮು ಮದ್ಯಕುದುರುಂಸೆಗಳೀ ಜನರವ್ಯವಸ್ಥಿತರ್ ।
ಕಿತ್ತಳೆ ಧಾನ್ಯಚರ್ಮ ಖನಿಜಂಗಳು ಪುಟ್ಟುಗುಮಾಗಳುಂ
ವಲಂ ॥
ಇತ್ತ ಯುರೋಪಖಂಡದೊಳು ಗೌರವಮಿಲ್ಲವು ಸ್ಪೇನದೇ
ಶಕೆ ।
ಮತ್ತೆ ಸ್ವಭಾಷೆಗೀಂಗಳೊಳು ಸ್ಪಾನಿಶಮೆಂಬಭಿಧಾನಮಿರ್ಪು
ದೆ ॥ ೫ ॥

## ಪೋರ್ತುಗಾಲದೇಶ.

### ಕಂದ.

ಸೆರೆ ಕಿತ್ತಳುಂಣೆಬಾದಾ ।
ಮುರುತರ ರೇಶಿಮೆಯುವಸ್ತ್ರಫಲಗಳ್ ಮದ್ಯಂ ॥
ದೊರೆಯುವವೈ ಖನಿಜಂಗಳಿ ।
ವರಭಾಷೆಗೆ ಪೋರ್ತುಗೀಜವೆಂಬಭಿಧಾನಂ ॥ ೬ ॥

## ಬೆಲ್ಜವ್ಮದೇಶ.

### ಕಂದ.

ಜನವಸ್ತಿ ವಿಪುಲಮಿಲ್ಲಿಯು ।
ಜನರಿಗಿಹುದುಬೆಲ್ಜಿಯೆಂಬ ಪೆಸರಿಳೆ ಬೆಳೆಗುಂ ॥
ಖನಿಯೊಳ್ ಕಲ್ಲಿದ್ದಲಿಗಳ್ ।
ವಿನುಗುಂ ಕಬ್ಬಿಣವು ಮನುಜರುದ್ಯೋಗಿಗಳುಂ ॥ ೭ ॥
ಚತುರರ್ಕೈಗಾರಿಕೆಯೊಳ್ ।
ಮತಿಯುಕ್ತರ್ ಫ್ರೆಂಚ ದಚ್ಚ ಭಾಷಾನಿಪುಣರ್ ॥
ಅತಿಸೂಕ್ಷ್ಮ ವಸ್ತ್ರಗಳ್ ಜನ ।
ನುತರತ್ನದ ಕಂಬಳಿಗಳು ಗಡಿಯಾಲಗಳುಂ ॥ ೮ ॥
ಅಂದದ ಹೆಣಿಕೆಯು ವಸ್ತ್ರಗ
ಳಂದದ ಬನೆಬಗೆಯು ಕಾರಖಾನೆಗಳುಂ ಕೇ ॥
ಳಂದದ ಸಾರಿನ ವಸ್ತ್ರಗ ।
ಳಿಂದಿಗೆ ಬೆಲ್ಜವ್ಮದೇಶದೊಳ್ ದೊರೆಯುವವೈ ॥ ೯ ॥

## ಹಾಲಂಡದೇಶ.

ಕಂದ.

ಮತಿವಂತರ್ ಸುದ್ಯೋಗಿಗ
ಳತಿಕುಶಲರ್ ಸರ್ವಹಸ್ತಕೌಶಲ್ಯದೊಳುಂ ||
ನುತಚಿತ್ರವಿದ್ಯೆಯೊಳಗಿವ
ರತಿಧೀರರ್ ನಿಜದೇವಾರಿಪರ್ಯಟನದೊಳಂ || ೧೦ ||
ವರ ಹಾಲಂಡದ ಸಕಲಜ
ನರಿಗಿಹುದೈ ದಚ್ಚರೆಂಬ ಪೆಸರಿಳೆ ಸಮುಪೈ ||
ಪರದೇಶಗಳಿಗೆ ಪೋಪುವು |
ಮರೆವುಪ್ಪಿನ ಮೀನುದನಗಳೀಗಳ್ ನಿಜದಿಂ || ೧೧ ||

## ಡೆನ್ಮಾರ್ಕದೇಶ.

ಕಂದ.

ಜಲಪರ್ಯಟನದೆ ಧೀರರ್ |
ಸಲೆಯುದ್ಯೋಗಿಗಳು-ಬುದ್ಧಿವಂತರು ಕೊಡುವರ್ ||
ಬೆಲೆಗೆ ದನಕಾಳುಗಳನು ಸ
ಕಲರುಂ ಸ್ವಿಡನ್ನಾರ್ವೆಜನರಂಪ್ರೋಲ್ವರ್ || ೧೨ ||

## ಸ್ವೀಡನ್-ನಾರ್ವೆ ದೇಶಗಳು.

( ಮತ್ತೇಭವಿಕ್ರೀಡಿತವೃತ್ತಂ. )

ಮನುಜರ್ ಬುದ್ಧಿಯುತರ್ ಸಮುದ್ರದೊಳು ಸಂಚಾರಕ್ಕೆ ಸಂ
ಪ್ರೀತಿಪರ್ |
ಮಿನಿಂದೊಳ್ ಕಬ್ಬಿಣ ಮುಂಟದೀಸುಡಿಯು ಭೂಪ್ರಖ್ಯಾತಮಾ
ಗಿರ್ಪುದು ||

ಅನಿಶಂಕಬ್ಬಿಣತಾಮ್ರಬೆಳ್ಳಿಗಳುಕಾಷ್ಠಂಧಾನ್ಯವುಂಪುಟ್ಟುಗುಂ।
ಮನಮುಕ್ಕೇರುವದೀಗಳುದ್ಯಮಕೆ ಸ್ವೀಡನ್ನಾರ್ವೇದೇಶಸ್ಥರ ॥
॥ ೧೩ ॥

## ರಸಿಯಾದೇಶ.

(ಮತ್ತೇಭವಿಕ್ರೀಡಿತ ವೃತ್ತ.)

ಎಸೆವೊಳ್ಗಟ್ಟಿಗೆ ನಾರುಹಗ್ಗಸೆಣಗಳ್ ಲೋಹಂಗಳುಂ ತೈಲವುಂ।
ರಸಿಯಾದೇಶದೆ ಡಾಂಬರುಂಸೆಗಳು ಚರ್ಮಂಧಾನ್ಯಗಳ್ ಪುಟ್ಟುಗುಂ ॥
ನಿಸದಂ ದೊಡ್ಡದು ದೇಶವಿೂಗಳರ ಸಂಗೇ ಝಾರನಾಮಂ ವಲಂ।
ಪೆಸರಂಪೊಂದಿಹುದೀಗಳೊಕ್ಕಲತನಂ ಮುಳ್ಳುಳ್ಳರಣ್ಯಂಗಳುಂ ॥ ೧೪ ॥

## ಜರ್ಮನಿಯ ದೇಶ

(ಉತ್ಪಲಮಾಲಾವೃತ್ತ)

ಎಂಣೆಯು ಯಂತ್ರ ವಾದ್ಯ ಪಶುಕಾಷ್ಠ ತಮಾಖು ದುಕೂಲ ವಸ್ತ್ರಗಳ್ ।
ಮಂಣಿನ ಪಾತ್ರೆ ದ್ರಾಕ್ಷರಸರತ್ನಗಳುಂ ಪಶುವುಂ ಸುಲೋಹಗಳ್ ॥
ಉಂಣೆ ವಿಶಾಲ ಜರ್ಮನಿಯೊಳಾಟದ ವಸ್ತುಗಳುಂ ಸಿಗುತಿರಲ್ ।
ಬಣ್ಣಿಸಲರ್ಹರೀಮನುಜರುದ್ಯಮ ಸರ್ವಕಲಾವಿಶಾರದರ್ ॥ ೧೫ ॥

## ಸ್ವಿತ್ಸರ್ಲಂಡ ದೇಶ.

( ಭಾಮಿನೀಷಟ್ಪದಿ. )

ಜನರು ಸ್ವಿತ್ಸರ್ಲಂಡದೊಕ್ಕಲ ।
ತನವಮಾಳ್ಪರು ಬುದ್ಧಿವಂತರು ।
ದನಗಳಾಭರಣಗಳು ರೇಶಿಮೆ ಪೆಣಿಕೆ ವಟ್ಟಿಗಳು ॥
ಅನುದಿನಂ ಗಡಿಯಾಲ ಕಟ್ಟಿಗೆ ।
ಯನುಕಳಿಪರುದ್ಯೋಗಿಗಳಿಹರ್ ।
ಜನರು ನಡಿಪರು ರಾಜ್ಯಭಾರವ ಪ್ರೀತಿಯಿಂ ನಿಜ
ದೆ ॥ ೧೬ ॥

## ಇತಲೀ ದೇಶ.

ಕಂದ.

ಫಲಮದ್ಯ ತೈಲ ಶುಭ್ರೋ ।
ಪಲಗಂಧಕ ಯಂತ್ರ ಸಣಬುರೇಶಿಮೆಗಳ್ ಕೇಳ್ ॥
ಸಲೆದೊರೆಗುಮಿತಾಲಿಯೊಳಗೆ ।
ಬಲುಪೆಸರಾಗಿಹರುಜನರುಗಾಯನ ಕಲೆಯೊಳ್ ॥
॥ ೧೭ ॥

ಬಡವರತಿ ಬುದ್ಧಿವಂತರ್ ।
ನಡೆದಪುದಾಲಸ್ಯಗಾರರಿರೆಕೃಷಿಕರ್ಮಂ ॥
ಗಡಚಿತ್ರವಿದ್ಯೆಯೊಳಿವರ್ ।
ನಡೆಕಾವ್ಯವಿಭೂಷಣಂಗಳೊಳ್ ಶ್ರೇಷ್ಠತಮರ್ ॥
॥ ೧೮ ॥

# ಆಸ್ಟ್ರಿಯಾ ಮತ್ತು ಹಂಗರೀ ದೇಶಗಳು.

( ಮತ್ತೇಭವಿಕ್ರೀಡಿತವೃತ್ತ. )

ಮಣಿಯಾಳ್ ಧಾತುಗಳುಂಟು ಭೂಮಿ ಬೆಳೆಯುಳ್ಳದ್ದಿ ಕರ್ಮವಿಾ
ಗಳ್ ವಲಂ
ಪಣಬುಣ್ಣೆಗ್ಲೆಸರಾಯಿಗಳ್‘ಫಲಗಳುಂಹಿತ್ತಾಳಿ ಸಾಮಾನುಗಳ್ ॥
ನೆಣಕಾಷ್ಠಂಗಳು ಕಾಳುಕಬ್ಬಿಣಗಳುಂ ಯಂತ್ರಂ ಸುವಾದ್ಯಂ
ಗಳುಂ ।
ಪಣವುಂಟಾಸ್ಟ್ರಿಯಹಂಗರೀಯೊಳು ವಿಶೇಷಂ ಪುಟ್ಟುಗುಂ
ಸತ್ಯದಿಂ ॥ ೧೯ ॥

## ತುರ್ಕಸ್ಥಾನ ದೇಶ.

ಕಂದ.

ತೊಗಲುತ್ತಮ ಫಲಗಳ್ ಕ ।
ಟ್ಟಿಗೆ ರೇಶಿಮೆ ಯುಂಸೆಯುಪ್ಪು ತಂಬಾಕುಂ ಧಾ ॥
ನ್ಯಗಳುಂಸುಗಂಧ ತೈಲಂ ।
ಸೊಗಯಿಸುಗುಂತುರ್ಕದೇಶದೊಳ್ ಪುಟ್ಟುವ
ಲಂ ॥ ೨೦ ॥

## ಗ್ರೀಸ ದೇಶ.

ಕಂದ.

ಗ್ರೀಸ ದೆಶುಷ್ಕ ಫಲಂಗಳ್ ।
ಸೀಸೆಂಣೆಗಳೀ ಪದಾರ್ಥಗಳ್ ಸಿಗುತಿಹವೈ ॥
ಎಸೆಯುವದು ದೇಶವಿದರೊಳು
ಗುಸುರ್ದಪರ್ವೈ ಮೂರುಭಾಗಗಳಿರುವವೆಂದುಂ ॥ ೨೧ ॥

೩ನೆಯ ಪಾಠ.

( ಆಫ್ರಿಕಾ ಖಂಡವು )

## ಇಜಿಪ್ತ ದೇಶ.

( ಭಾಮಿನೀಷಟ್ಪದಿ. )

ಅರಳೆ ತಂಬಾಕುಗಳು ಧಾನ್ಯಗ ।
ಳಿರದೆ ಪರದೇಶಕ್ಕೆ ಪೋಗು ।
ತ್ತಿರುವವೈಗಜದಂತ ಚರ್ಮಗಳನ್ನು ಪೊಮ್ಮಣ್ಣಂ ॥
ತರುವರಾಫ್ರಿಕ ಮಧ್ಯದಿಂದಂ ।
ತರತರದ ಶಹಮೃಗದ ಗರಿಯು ।
ನ್ನಿರದೆ ಮುದದಿಂಕಾರವಾನರಿಜಿಪ್ತ ದೇಶಕ್ಕೆ ॥ ೧ ॥

## ಬಾರ್ಬರೀ ದೇಶ.

ಕಂದ.

ಫಲಧಾನ್ಯ ಚರ್ಮಹಯುಗಳ ।
ನೊಲಿದೀ ಬಾರ್ಬರಿಯ ಜನರು ತಾಮ್ರವನುಪ್ಪಂ ॥
ಪಲೆಬೆಳ್ಳಿಯುಸು ಮಿವರರಬ ।
ಕುಲದವರ್ಕೈ ಪರರದೇಶಗಳಿಗುಂ ಕಳಿಪರ್ ॥ ೨ ॥

## ಸೆನಿಗಾಂಬಿಗ್ಯಾಗಿನಿ ದೇಶಗಳು.

( ಭಾಮಿನೀಷಟ್ಪದಿ. )

ಅಕ್ಕಿ ಕೊಬ್ಬರಿ ಯೆಂಣಿ ಕಟ್ಟಿಗೆ ।
ತಕ್ಕ ಪೊಮ್ಮಣ್ಣರಳೆ ಪರದೇ ।
ಶಕ್ಕೆ ಫಲಗಜದಂತ ಚರ್ಮಗಳಾವೆಗಳ ತೋಗಲುಂ ॥
ಮಿಕ್ಕುಳಿದ ಶಹಮೃಗದ ಗರಿಗಳ್ ।
ಚೊಕ್ಕ ಮೇಣಂ ಜೇನತುಪ್ಪವು ।
ಮುಕ್ಕರತೆಯಿಂ ಪೋಕುಗುಂಸೆನಿಗಾಂಬಿಯಾಗಿನಿ
ಯಿಂ ॥ ೩ ॥

## ದಕ್ಷಿಣಾಫ್ರಿಕಾ ದೇಶ.

ಕಂದ.

ಮದ್ಯಂಬುಂದುಣ್ಣೆಗಳುಂ ।
ಸದ್ದಿಲ್ಲದೆ ಶಹಾಮೃಗದ ಗರಿಯುಂ ಚರ್ಮಂ ॥
ಸದ್ಯದೆ ಪೋಕುಮಿವೆಲ್ಲಂ ।
ಹೃದ್ಯಮಿಹಾಫ್ರಿಕದ ದಕ್ಷಿಣದ ಭಾಗದೆ ಕೇಳ್ ॥ ೪ ॥

## ನಾತಾಲ-ಪೂರ್ವ ಆಫ್ರಿಕಗಳು.

ಕಂದ.

ಗಜದಂತಂ ಸಕ್ಕರೆಯುಂ ।
ನಿಜದಿಂ ನಾತಾಲ ದೇಶದೊಳ್ ಪುಟ್ಟುಗುಗುಂ ॥
ಗಜದಂತಂ ಬಂಗಾರಂ
ಸುಜನನುತಂ ಪೂರ್ವದಾಫ್ರಿಕದ ಭಾಗದೊಳುಂ ॥ ೫ ॥

೪ ನೆಯ ಪಾಠ.

( ಅಮೇರಿಕಾ ಖಂಡವು )

## ಕೆನಡಾ ದೇಶ.

ಕಂದ.

ಪರದೇಶಗಳಿಗೆ ಕಟ್ಟಿಗೆ ।
ಉರುತರ ಧಾನ್ಯಗಳುಂ ಚರ್ಮವುಂ ಸ್ತೋಮಯು ಪೊಸಂ ॥

ನೆರೆ ಕಾನಡಾ ಸುದೇಶದಿ ।
ಮಿರದೀಗಳ್ ಪೋಕುಮಿಹವು ಚಿನ್ನದ ಖಣಿಗಳ್ ॥೧॥

## ಯುನೈತೇದಸ್ಟೇಟ್ಸ ದೇಶ.

### ಭಾಮಿನೀಷಟ್ಪದಿ.

ಹತ್ತಿ ಕಬ್ಬಿಣ ಮುಕ್ಕಿ ಮೊದಲಾ ।
ದುತ್ತಮದ ಧಾನ್ಯಗಳು ಯಂತ್ರಗ ।
ಳಿತ್ತಕಾರೋಲೈನ ಜಾರ್ಜಿಯಗಳೊಳು ಮುಕ್ಕಿಗಳು ॥
ಹತ್ತಿಯುಂಪುಟ್ಟಲ್ಕೆ ಪೋಪುವು ।
ಮತ್ತೆ ಯೂನೈತೇದಸ್ಟೇಟ್ಸ ದೆ ।
ಸುತ್ತಲೂ ಮೇಲಾದ ವರ್ಜಿನಿಯೂದ ತಂಬಾಕುಂ ॥ ೨ ॥

## ಮೆಕ್ಸಿಕೋ ದೇಶ

### ಕಂದ.

ಸರಕುಗಳುಂ ಮೆಕ್ಸಿಕೊದೊಳ್ ।
ಕಿರಮಂಜೀಕಾಳು ನೀಲಿ ಕಟ್ಟಿಗೆ ಚರ್ಮಂ ॥
ದೊರೆದಪುವು ಬೆಳ್ಳಿ ತಾಮ್ರಂ ॥
ಪರಜನಸತ್ತಾತ್ಮಕಂವಲಂ ಪದ್ಧತಿಯುಂ ॥ ೩ ॥

## ಮಧ್ಯಅಮೇರಿಕಾ ದೇಶ—ನೆರೆಯದ್ವೀಪಗಳು.

ಕಂದ.

ವರಮಧ್ಯಾಮೇರಿಕದೊಳ್ ।
ಕಿರಮಂಜೀಕಾಳು ಬುಂದು ನೀಲಿಗಳಿರ್ಕ್ಕುಂ ॥
ನೆರೆಯಿಹದ್ವೀಪದೊಳುಂ ಸ ।
ಕ್ಕರೆ ಬುಂದುಂ ಹತ್ತಿ ಶುಂಠಿ ತಂಬಾಕುಗಳುಂ ॥ ೪ ॥

## ಕೋಲಂಬಿಯಾ-ವೆನುಜಯುಲಾ ದೇಶಗಳು.

ಕಂದ.

ವರಕೋಲಂಬಿಯದೊಳ್ ರ ।
ಬ್ಬರು ಹತ್ತಿಯು ನೀಲಿಯೊಂದು ಬಗೆಯೌಷದವುಂ ॥
ಇರುವವು ವೆನುಜಯುಲಾದೊಳ ।
ಗರಳೆಯಿದೇ ಸರಕು ದೊರೆಗುಮತಿಶಯದಿಂದಂ ॥ ೫ ॥

## ಇಕ್ವೇದೋರ, ಗಿಯಾನಾ ದೇಶಗಳು.

(ಭಾಮಿನೀಷಟ್ಪದಿ.)

ಅರಳೆ ಕಾಕವಿ ಮದ್ಯ ಬುಂದುಗ ।
ಳಿರದೆ ಮೆಣಸಿನಕಾಯಿಯೌಷಧ ।
ಮಿರುವವೈ ಸಕ್ಕರೆ ಮಸಾಲೆಗಳುಂಗಿಯಾನಾದೊಳ್ ॥
ಉರುತರೌಷಧ ತೊಟೆಯುಂ ರ ।
ಬ್ಬರವು ತೆಂಗುಗಳಿಕ್ವೆದೋರೊಳ್

ಸರಕುಗಳ್ ದೊರೆದ ಪುವ್ರ ನಿಜದಿಂ ಸಾರಿಪೇಳು
ವೆನು ॥ ೬ ॥

## ಭ್ರಾಜಿಲ್–ಪೇರು ದೇಶಗಳು.

(ಭಾಮಿನೀಷಟ್ಪದಿ.)

ಸಕ್ಕರರಳೆಯು ಬೆಳ್ಳಿರತ್ನಂ।
ತಕ್ಕ ಚಿನ್ನಂ ಭ್ರಾಜಲದೊಳುಂ।
ಮಿಕ್ಕುಳಿದ ಸೋರುಪ್ಪು ಗ್ವಾನೋರತ್ನ ಧಾತುಗಳು ॥
ಚೊಕ್ಕಟಮಿಹಲ್ಪಾಕದುಂಣೆಯು
ಲೆಕ್ಕವಿಲ್ಲದ ಸಿತ್ತು ಪೆರುವೊಳ್
ಗಕ್ಕನೇ ಸಿಗುತಿರಲು ಮನುಜರ್ ತರುವರೈ ಮುದ
ದಿಂ ॥ ೭ ॥

## ಬೊಲುವಿಯಾ ಚಿಲೀ ದೇಶಗಳು.

(ಭಾಮಿನೀಷಟ್ಪದಿ.)

ಬುಂದು ತೆಂಗುಂ ತವರು ಬೆಳ್ಳಿ ಗ।
ಳಂದವಿರುವಲ್ಪಾಕ ದುಂಣೆ ಗ।
ಳಿಂದಿಗುಂ ಲೋಹಗಳುಮೌಷಧವುಂ ಬೊಲುವಿಯ
ದೊಳು ॥
ಕುಂದಮಿಲ್ಲದ ಬೆಳ್ಳಿ ತಾಮ್ರಂ
ಸಂದಗೋದಿಯು ಮುಣ್ಣೆಯರಳೆಯು
ಪುಂದೆ ಸರಕುಗಳಿಲ್ಲ ಚೀಲೀ ದೇಶದೊಳಗಿಹ
ವು ॥ ೮ ॥

# ಲಾಪ್ಲಾತಾ ಉರ್ಫ ಆರ್ಜೆಂಟೈನಕಾನ್ ಫೇಡರೇಶನ್–ಪಾರಾಗ್ವೆ–ಯುರಾಗ್ವೆ ದೇಶಗಳು.

(ಮತ್ತೇಭವಿಕ್ರೀಡಿತ ವೃತ್ತ.)

ನೆಣವುಂ ಚರ್ಮವಿರಲ್ಕೆತರ್ಪರನಿಶಂಲಾಪ್ಲಾತದಿಂಸತ್ಯದಿಂ।
ಹಣಗೊಟ್ಟೀಗಳು ಮಚ್ಚ ಚರ್ಮಚಹ ತಂಬಾಕಂ ಸುಪಾರಾ
ಗ್ವೆಯಿಂ ॥
ನೆಣಚರ್ಮಾಸ್ಥಿಗಳುಂಣಿಯುಂದೊರೆವವೈ ಯೂರಾಗ್ವೆಯೊಳ್
ಕೇಳ್ವಲಂ ।
ಫಣಿಭೂಷಂಪರಮೇಶ್ವರಂ ಸಲುಹುಗಂತೇವಾಸಿವರ್ಗಂಗ
ಳಂ ॥ F ॥

೫ ನೆಯ ಪಾಠ

(ಓಶಿಯಾನಿಯಾ,)

## ಮಲಾಯರಾಶಿಯವಾ.

ಕಂದ-

ಸಕ್ಕರೆ ಲವಂಗ ಬುಂದು ಗ
ಳಕ್ಕರೆಯಿಂನೀಲಿದಾಲಚಿನ್ನಿಗಳೀಗಳ್ ॥
ಅಕ್ಕಿಗಳುಂತಂಬಾಕುಂ।
ತಕ್ಕಮಲಾಯರಾಶಿಯಾದೊಳುಂಪುಟ್ಟುಗು
ಗುಂ ॥ ೧ ॥

## ಆಸ್ಟ್ರೇಲಿಯಾ.

( ಭಾಮಿನೀಷಟ್ಪದಿ. )

ತವರು ಸಕ್ಕರೆಯುಂಣೆ ನೆಣಮೊ ।
ಘೃವತ್ತೈಲ ಬಂಗಾರ ತಾಮ್ರ ಗ ।
ಳಿವು ಮರಳೆ ಧಾನ್ಯಗಳು ಮಾಸ್ಟ್ರೇಲಿಯದೆ ಚ
ರ್ಮಗಳು ॥
ಕವಿದು ಪರದೇಶಕ್ಕೆ ಪೋಪುವು ।
ಜವದೆಸೀಸುಗಳಿದರ ಕ್ಷೇತ್ರ ಫ ।
ಲವುಯುರೋಪದ ಪಂಚಷಷ್ಠಾಂಶವನು ಪೋಲು
ವದು ॥ ೨ ॥

## ನ್ಯೂಝಿಲಂದ ದ್ವೀಪಗಳು,

ಕಂದ.

ಗರಿಗಳ್ ಮಸಾಲೆ ಸರಕು ಗ ।
ಳಿರುವವು ಕಟ್ಟಿಗೆಯು ನ್ಯೂಗಿನೀ ದ್ವೀಪದೊಳುಂ ॥
ವರಚಿನ್ನ ಮುಣ್ಣಿ ಮಿವೆರಡು
ಸರಕುಗಳುಂ ನ್ಯೂಜಿಲಂಡನಡು ಗಡ್ಡೆಗಳೋಳ್ ॥ ೩ ॥

೬ ನೆಯ ಪಾಠ.

## ಹಿಂದುಸ್ಥಾನ ದೇಶ,

ಪ್ರತಿಯೊಂದು ಸರಕು ಹಿಂದುಸ್ಥಾನದ ಯಾವ ಯಾವ ಇ ಲಾಖೆಗಳಲ್ಲಿ ಹುಟ್ಟುತ್ತದೆಂಬ ಬಗ್ಗೆ.

೧. ಪ್ರಶ್ನೆ—ಕಬ್ಬಿಣ ಖಣಿಗಳು ಎಲ್ಲೆಲ್ಲಿ ಉಂಟು?

ಉತ್ತರ. (ಕಂದಾರ್ಥದ ದ್ವೀತಿಯ ಚರಣಂ)

ಬಂಗಾಲದಿಲಾಖೆಯಲ್ಲಿ ಕಬ್ಬಿಣ ಖನಿಗಳ್ ‖ ೧ ‖

೨. ಪ್ರಶ್ನೆ—ಕಿನಕಾಪು, ಕರೇ ಹಾಸಿದ ಚರ್ಮ, ಸೋರುಪ್ಪು

ಇವು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದ.)

ಕರೆಹಾಸಿದ ಚರ್ಮಂ ಕೇ।
ಳುರುತರಕಿನಕಾಪು ವಿಸುತಸೋರುಪ್ಪು
ಗಳುಂ ‖
ವರಸಂಯುಕ್ತ ಪ್ರಾಂತದೆ।
ದೊರೆವವು ನಿಜದಿಂದೆ ಹಿಂದು ದೇಶದೊ
ಳೀಗಳ್ ‖ ೨ ‖

೩. ಪ್ರಶ್ನೆ.— ಅರಗು ಎಲ್ಲೆಲ್ಲಿ ದೊರೆಯುವದು?

ಉತ್ತರ. (ಕಂದಾರ್ಧ.)

ದೊರೆಗುವುಸಾಮದೊಳರಗುಂ
ವರಸಂಯುಕ್ತಮಿಹ ಪ್ರಾಂತದೊಳಗೆ ವಿಶೇ
ಷಂ ‖ ೩ ‖

೪. ಪ್ರಶ್ನೆ—ಆನೆಯ ಹಲ್ಲುಗಳು ದೊರೆಯುವ ದೇಶಗಳಾವವು?

ಉತ್ತರ. (ಕಂದಾರ್ಧ)

ಗಜದಂತಂಗಳ್ ದೊರೆಗುಂ।
ನಿಜದಿಂ ಬಂಗಾಲ ರಾಜ್ಯ ಪಂಜಾಬ
ಗಳೊಳ್ ‖ ೪ ‖

೫. ಪ್ರಶ್ನೆ.—ಜರತಾರಿಯ ವಸ್ತ್ರ, ಸುಣ್ಣದ ಹರಳು, ಘಟಕ, ಸೈಂಧವಲವಣ ಇವು ಎಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದ.)

ಜರತಾರೀ ವಸ್ತ್ರಗಳುಂ।
ವರ ಸೈಂಧವಲವಣ ಮುಂಟು ಪಂಜಾ
ಬದೆ ದಲ್ ॥
ಉರುತರ ಘಟಕದ ಖಣಿಗಳ್ ।
ನೆರೆ ಸುಣ್ಣದ ಹರಳುಗಳಿವು ದೊರೆಗುಂ
ನಿಜದಿಂ ॥ ೫ ॥

೬. ಪ್ರಶ್ನೆ.—ಚಹಾ ಎಲ್ಲೆಲ್ಲಿ ದೊರೆಯುತ್ತದೆ?

ಉತ್ತರ. (ಕಂದಾರ್ಧ.)

ಚಹಮಿರ್ಪುದು ಬಂಗಾಲ ದೊ।
ಳು ಹಿಮಾಲಯ ಗುಡ್ಡದಲ್ಲಿ ಪಂಜಾಬ
ದೊಳುಂ ॥ ೬ ॥

೭. ಪ್ರಶ್ನೆ—ಚಿನ್ನ ಬೆಳ್ಳಿಗಳ ಖಣಿಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದಾರ್ಧ.)

ಜಬ್ಬಲ್ ಪುರ ಸಂಸ್ಥಾನದೊ।
ಳಬ್ಬಬ್ಬಾ ಚಿನ್ನ ಬೆಳ್ಳಿ ಖಣಿಗಳ್ ತೋ
ರ್ಕ್ಕುಂ ॥ ೭ ॥

೮. ಪ್ರಶ್ನೆ.—ತಾಮ್ರದ ಖಣಿಗಳು ಎಲ್ಲೆಲ್ಲಿ ಇರುತ್ತವೆ?

ಉತ್ತರ. (ಕಂದಾರ್ಧ.)

ಸುಜಬಲ್‌ಪುರ ಸಂಸ್ಥಾನದೆ।
ನಿಜದಿಂ ಬಂಗಾಲದಲ್ಲಿ ತಾಮ್ರದ ಖಣಿ
ಗಳ್ ॥ ೮ ॥

೯. ಪ್ರಶ್ನೆ.—ಕಲ್ಲಿನ ಖಣಿಗಳು ಎಲ್ಲೆಲ್ಲಿ ಇರುತ್ತವೆ?

ಉತ್ತರ. (ಕಂದಾರ್ಧದ ದ್ವಿತಿಯ ಚರಣಂ)

ರಾಜಸ್ಥಾನದೊಳು ಕಲ್ಲಿನುತ್ತಮ
ಖಣಿಗಳ್ ॥ ೯ ॥

೧೦. ಪ್ರಶ್ನೆ.—ಉಣ್ಣೆಯ ವಸ್ತ್ರಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದಾರ್ಧ.)

ರಾಜಸ್ಥಾನದೆ ದೊರೆಗುಂ।
ರಾಜಿಪ ಪಂಜಾಬದಲ್ಲಿ ಯುಂಣೆಯ
ವಸ್ತ್ರಂ ॥ ೧೦ ॥

೧೧. ಪ್ರಶ್ನೆ.—ನೂಲಿನ ಬಟ್ಟೆಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಶಾರ್ದೂಲವಿಕ್ರೀಡಿತವೃತ್ತದ ಪ್ರಥಮಚರಣಂ.)

ರಾಜಸ್ಥಾನದೊಳೀಗ ಕೇಳ್ ಗೆಳೆಯನೇ ನೂಲ್ಬಟ್ಟೆಗಳ್
ಪುಟ್ಟುಗುಂ ॥ ೧೧ ॥

೧೨ ಪ್ರಶ್ನೆ—ರೇಶಿಮೆಯ ವಸ್ತ್ರಗಳು ಎಲ್ಲೆಲ್ಲಿ ದೊರೆಯು
ತ್ತವೆ ?

ಉತ್ತರ. (ಶಾರ್ದೂಲ ವಿಕ್ರೀಡಿತವೃತ್ತದ
ಪ್ರಥಮ ಚರಣಂ.)

ಮಧ್ಯ ಪ್ರಾಂತದೊಳುಂಟು ರೇಶಿಮೆಯ
ವಸ್ತ್ರಂಗಳ್ ಸುಬಂಗಾಲದೊಳ್ ॥೧೨॥

೧೩. ಪ್ರಶ್ನೆ.—ತೊಗಲು, ಎಣ್ಣೆ, ತುಪ್ಪ ಇವು ಎಲ್ಲೆಲ್ಲಿ ದೊರೆ
ಯುತ್ತವೆ ?

ಉತ್ತರ. (ಕಂದಾರ್ಧ.)

ತೊಗಲೆಂಣೆ ತುಪ್ಪಗಳು ಕೇಳ್ ।
ಮಿಗೆ ಮಧ್ಯ ಪ್ರಾಂತದಲ್ಲಿ ದೊರೆಗುಂ
ಬಹುಳಂ ॥ ೧೩ ॥

೧೪. ಪ್ರಶ್ನೆ.—ಶ್ರೀಗಂಧ, ರೇಶಿಮೆ, ಫಲ, ಸಿಸವು ಇವು ಎ
ಲ್ಲೆಲ್ಲಿ ದೊರೆಯುತ್ತವೆ ?

ಉತ್ತರ. (ಕಂದ.)

ಶ್ರೀಗಂಧಂ ರೇಶಿಮೆ ಫಲ ।
ಮೊಗಳ್ ಮೈಸೂರವೆಂಬ ಸಂಸ್ಥಾನ
ದೊಳುಂ ॥
ಬಾಗದ ಸಿಸವಿನ ಕಟ್ಟಿಗೆ
ಯಾಗಳು ಮಿಂತೆಲ್ಲವೊಡವೆಗಳ್
ದೊರೆದಪವೈ ॥ ೧೪ ॥

೧೫. ಪಶ್ನೆ.— ತೇಗಿನ ಕಟ್ಟಿಗೆ ಎಲ್ಲೆಲ್ಲಿ ದೊರೆಯುತ್ತವೆ?
ಉತ್ತರ. (ಶಾರ್ದೂಲ ವಿಕ್ರೀಡಿತವೃತ್ತದ
ಪ್ರಥಮ ಚರಣಂ.)
ಮಧ್ಯಪ್ರಾಂತದೊಳುಂಟು ತೇಗು
ಮಹಿಸೂರೆಂಬೊಂದು ಸಂಸ್ಥಾನ
ದೊಳ್ ॥ ೧೫ ॥

೧೬. ಪ್ರಶ್ನೆ.—ಕಾತಿಯು ಹಗ್ಗ ಚರ್ಮಗಳು ಎಲ್ಲೆಲ್ಲಿ ದೊರೆಯು
ತ್ತವೆ?
ಉತ್ತರ. (ಕಂದಾರ್ಧ.)
ಮದ್ರಾಸದಿಲಾಖೆಯೊಳುಂ
ಭದ್ರಂಗಳಿಂ ಕಾತಿಹಗ್ಗ ಚರ್ಮಗ
ಳುಂಟೈ ॥ ೧೬ ॥

೧೭. ಪ್ರಶ್ನೆ.—ಬುಂದು ಎಲ್ಲೆಲ್ಲಿ ದೊರೆಯುತ್ತವೆ?
ಉತ್ತರ. (ಕಂದಾರ್ಧ.)
ಮಹೀಸೂರದೆ ಮದ್ರಾಸದೊ।
ಳಹಹ ನಿಜದೆ ಕೇಳು ಬುಂದುಕಾ
ಳ್ಗಳ್ ದೊರೆಗುಂ ॥ ೧೭ ॥

೧೮. ಪ್ರಶ್ನೆ.—ರಾಗಿ ಎಲ್ಲೆಲ್ಲಿ ದೊರೆಯುತ್ತವೆ?
ಉತ್ತರ. (ಕಂದಾರ್ಧದ ದ್ವಿತೀಯ ಚರಣಂ.)
ಮದ್ರಾಸದಿಲಾಖೆಯಲ್ಲಿ ರಾಗಿ
ಗಳುಂಟೈ ॥ ೧೮ ॥

೧೯ ಪ್ರಶ್ನೆ.—ಕತ್ತಿಗಳು ಎಲ್ಲೆಲ್ಲಿ ದೊರೆಯುತ್ತವೆ?
ಉತ್ತರ. (ಕಂದಾರ್ಧದ ದ್ವಿತೀಯ ಚರಣಂ)
ರಾಜಸ್ತಾನದಲಿ ಕತ್ತಿಗಳ್ ದೊರೆದ
ಪವೈ ॥ ೧೯ ॥

೨೦. ಪ್ರಶ್ನೆ.—ಸಕ್ಕರೆಯು ಎಲ್ಲೆಲ್ಲಿ ದೊರೆಯುತ್ತದೆ?

ಉತ್ತರ. (ಕಂದ.)

ಸಕ್ಕರೆ ರಾಜಸ್ಥಾನದೊ।
ಳಕ್ಕುಂ ಮಹಿಸೂರದಲ್ಲಿ
ಮದ್ರಾಸದೊಳುಂ ॥
ಮಿಕ್ಕೆಡೆಯಲ್ಲಿಲ್ಲಂದಲ್
ತಕ್ಕುದು ಸಂಯುಕ್ತರಾಜ್ಯದೊಳು
ದೊರೆಯುವದೈ ॥ ೨೦ ॥

೨೧. ಪ್ರಶ್ನೆ.—ಮೆಣಸು ಯಾಲಕ್ಕಿಗಳು ಎಲ್ಲೆಲ್ಲಿ ದೊರೆಯುತ್ತವೆ?



ಉತ್ತರ. (ಕಂದಾರ್ಧ.)

ಮೆಣಸುಗಳುಂ ಮಹಿಸೂರದೊ
ಳಣಿಯರದಿಂ ಮುಂಬಯಿಯೊಳು
ಯಾಲಕ್ಕಿಗಳುಂ ॥ ೨೧ ॥

೨೨. ಪ್ರಶ್ನೆ—ಅಡಿಕೆ, ಕುಸುಬೆಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದಾರ್ಧ.)

ಅಡಿಕೆಗಳುಂ ಕುಸುಬೆಗಳುಂ।
ನಡೆ ಮುಂಬಯಿ ಲಾಖೆಯಲ್ಲಿ
ಸತತಂ ದೊರೆಗುಂ ॥ ೨೨ ॥

೨೩ ಪ್ರಶ್ನೆ—ಉಪ್ಪು ಎಲ್ಲೆಲ್ಲಿ ದೊರೆಯುವದು?

ಉತ್ತರ. (ಕಂದಾರ್ಧಂ)

ಉಪ್ಪುವಲಂ ಮುಂಬಯಿಯೊ
ಳೊಪ್ಪುವದೈ ಕೇಳು ಪ್ರಿಯನೆ ವರ್ಹಾ
ಡದೊಳುಂ ॥ ೨೩ ॥

೨೪. ಪ್ರಶ್ನೆ—ಎಣ್ಣೆಯು ಎಲ್ಲೆಲ್ಲಿ ದೊರೆಯುತ್ತದೆ?

ಉತ್ತರ. (ಕಂದಾರ್ಧದ ದ್ವಿತೀಯ ಚರಣಂ)

ಮುಂಬಯಿಲಾಖೆಯೊಳಗುಂ ಕೆ
ದೊರೆವುದು ಬಹುಳಂ॥ ೨೪ ॥

೨೫. ಪ್ರಶ್ನೆ.—ತೊಲೆ ರಬ್ಬರ ಇವು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದಾರ್ಧದ ದ್ವಿತೀಯ ಚರಣಂ)

ತೊಲೆ ರಬ್ಬರುಗಳನಸಾವುದಿಂದಂ
ತರ್ಪರ್ ॥ ೨೫ ॥

೨೬. ಪ್ರಶ್ನೆ.—ಅಕ್ಕಿಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. (ಕಂದ)

ಆಕ್ಕಿಗಳಂ ಜನರೆಲ್ಲರ್
ಚಿಕ್ಕ ಮಹೀಸೂರ ರಾಜ್ಯ ಮದ್ರಾ
ಸಗಳಿಂ ॥
ತಕ್ಕ ಸಂಯುಕ್ತ ಪ್ರಾಂತದಿ
ಮಕ್ಕರೆಯಿಂ ತರ್ಪರತ್ತೆ ಮುಂಬಯಿ
ಪುರಿಯಿಂ ॥ ೨೬ ॥

೨೭. ಪಶ್ನ.—ನೀಲಿಯು ಎಲ್ಲೆಲ್ಲಿ ದೊರೆಯುತ್ತದೆ?
ಉತ್ತರ. (ಕಂದ.)

ನೀಲಿಯು ಪಂಜಾಬದೊಳೀ।
ಕಾಲಕೆ ಸಂಯುಕ್ತ ರಾಜ್ಯ ಬಂಗಾಲ
ಗಳೊಳ್ ॥
ಸೋಲದ ಮುಂಬೈಪುರದೊಳ್
ಮೇಲಿಹ ಮದ್ರಾಸ ರಾಜ್ಯದೊಳು
ಪುಟ್ಟುಗುಗುಂ ॥ ೨೭ ॥

೨೮. ಪಶ್ನ—ಅಫು ಎಲ್ಲೆಲ್ಲಿ ದೊರೆಯುತ್ತದೆ?
ಉತ್ತರ (ಕಂದ.)

ರಾಜಸ್ತಾನದೊಳ ಫುವ್ವಂ।
ರಾಜಿಪ ಪಂಜಾಬ ರಾಜ್ಯ ಬಂಗಾಲ
ಗಳೊಳ್ ॥
ತೇಜದ ಮುಂಬೈ ಸೆಂತ್ರ
ಲ್ಲೇಜನ್ಸೀ ಯಿಂಡಿಯಾದೊಳುಂ
ಪುಟ್ಟುಗುಗುಂ ॥ ೨೮ ॥

೨೯. ಪ್ರಶ್ನ.—ಅರಳೆಯು ಎಲ್ಲೆಲ್ಲಿ ದೊರೆಯುತ್ತದೆ?
ಉತ್ತರ. (ಕಂದ.)

ಆರಳೆಯು ಮಧ್ಯಪ್ರಾಂತದೊ।
ಳಿರುವದು ಸಂಯುಕ್ತರಾಜ್ಯ
ವರ್ಹಾಡ ಗಳೊಳ್ ॥
ನೆರೆಮಧ್ಯ ಹಿಂದು ದೇಶದೆ
ದೊರೆಗುಂ ಪುಸಿಯಲ್ಲ ನಿಜದೆ ಕೇಳ್
ಪ್ರಿಯ ಮಿತ್ರಾ ॥ ೨೯ ॥

೩೦. ಪ್ರಶ್ನೆ.— ತಾಳೆ ಇಪ್ಪಿಯ ಗಿಡಗಳು ಎಲ್ಲೆಲ್ಲಿ ದೊರೆಯು
ತ್ತವೆ?

ಉತ್ತರ. ( ಕಂದಾರ್ಧ. )

ತಾಳೆಗಳನ್ನಿಪ್ಪಿಗಳಂ
ಪೇಳದೆಮಧ್ಯದಿಹಪ್ರಾಂತದಿಂತರು
ತಿರ್ಪರ್ ॥ ೩೦ ॥

೩೧. ಪ್ರಶ್ನೆ.—ಕಬ್ಬುಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. ( ಕಂದಾರ್ಧ. )

ಬಂಗಾಲದೆ ಪಂಜಾಬದೆ
ಕಂಗನೆ ಮಧ್ಯದಿಹಪ್ರಾಂತದೊಳ್
ಕಬ್ಬುಗಳುಂ ॥ ೩೧ ॥

೩೨. ಪ್ರಶ್ನೆ.—ಕಲ್ಲಿದ್ದಲಿ ಖಣಿಗಳು ಎಲ್ಲೆಲ್ಲಿ ದೊರೆಯುತ್ತವೆ?

ಉತ್ತರ. ( ಕಂದ. )

ಕಲ್ಲಿದ್ದಲಿ ಖಣಿಗಳ್ ಕೇ।
ಳಿಲ್ಲಿ ನಿಜಾಮ್ ರಾಜ್ಯದಲ್ಲಿ ವರ್ಧಾಡ
ದೊಳುಂ ॥
ಬಲ್ಲಿದ ಮಧ್ಯಪ್ರಾಂತದೊ
ಳಿಲ್ಲಿಯುಮಿರ್ದುದನು ತಿಳಿಯೊ ಬಂ
ಗಾಲದೊಳುಂ ॥ ೩೨ ॥

೩೩. ಪ್ರಶ್ನೆ.—ತಂಬಾಕು ಎಲ್ಲೆಲ್ಲಿ ದೊರೆಯುತ್ತದೆ?

ಉತ್ತರ. ( ಕಂದ. )

ರಾಜಸ್ಥಾನದೆ ದೊರೆಗುಂ।
ತೇಜದ ಪಂಜಾಬಿಲಾಖೆಯೊಳ್ ತಂ
ಬಾಕುಂ ॥

ಸಾಜದೆ ಜನಕೆಲ್ಲಕೆ ಕೇಳ್
ಮಾಜದೆನೆರೆ ಮಧ್ಯ ಹಿಂದುದೇಶ
ದೊಳೀಗಳ್ ॥ ೩೩ ॥

೩೪. ಪ್ರಶ್ನ.— ಹತ್ತಿಯು ಎಲ್ಲಿಲ್ಲಿ ದೊರೆಯುತ್ತದೆ?

ಉತ್ತರ. (ಶಾರ್ದೂಲವಿಕ್ರೀಡಿತ ವೃತ್ತಾರ್ಧಂ)
ರಾಜಸ್ಥಾನದೆ ಮಧ್ಯರಾಜ್ಯದೊಳು
ಕೇಳ್ ಮದ್ರಾಸ ಮುಂಬೈ
ಗಳೊಳ್ ।
ತೇಜಸ್ಸಿಂ ದೊರೆಗುಂ ನಿರಂತರಮಿ
ದುಂ ಶುಭ್ರೋತ್ತಮಂ ಹತ್ತಿ
ಯುಂ ॥ ೩೪ ॥

೩೫ ಪ್ರಶ್ನ.— ಎಣ್ಣೆಯ ಕಾಳುಗಳು ಎಲ್ಲೆಲ್ಲಿ ದೊರೆಯು
ತ್ತವೆ?

ಉತ್ತರ. (ಶಾರ್ದೂಲವಿಕ್ರೀಡಿತ ವೃತ್ತಾರ್ಧಂ.)
ಎಣ್ಣೇಕಾಳುಸು ಮಧ್ಯ ರಾಜ್ಯದೊಳು
ಕೇಳ್ ಮದ್ರಾಸ ಮುಂಬೈ
ಗಳೊಳ್ ।
ಕಂಣಿಂಗಂದದೊಳಿರ್ಪಯೋಧ್ಯದೊ
ಳುದಲ್ ವಾಯುವ್ಯ ದೊಳ್
ಪುಟ್ಟುಗುಂ ॥ ೩೫ ॥

೩೬. ಪ್ರಶ್ನ.—ಗೋದಿ ಎಲ್ಲೆಲ್ಲಿ ದೊರೆಯುವದು ?

ಉತ್ತರ. (ಶಾರ್ದೂಲ ವಿಕ್ರೀಡಿತ ವೃತ್ತಾರ್ಥಂ. )

ಗೋಧೂಮಂ ವರಮಧ್ಯ ರಾಜ್ಯ
ದೊಳುದಲಃ ಮುಂಬೈಯೊಳುಂ
ಪುಟ್ಟುಗುಂ।
ಮಾದೇವಂಗತಿ ಭಕ್ತಿಯಿಂ ಕೊಡು
ವರೈ ಸನ್ಮಧ್ಯ ಹಿಂದೂಜನರ್ ॥ ೩೬ ॥

೭ ನೆಯ ಪಾಠ.

## ಕಠಿಣ ಶಬ್ದಾರ್ಥಗಳು.

(೧ನೆಯ ಪಾಠದ ಪದ್ಯಗಳಬಗ್ಗೆ.)

೧. ಸಲೆ ... = ಚನ್ನಾಗಿ.
೨. ಸಲಹಿಪರ್ = ಜೋಪಾನ ಮಾಡುವರು.
ಒಳ್ಳುಂಣೆ = ಉತ್ತಮವಾದ ಉಂಣಿ.
೩. ವರ ... = ಶ್ರೇಷ್ಠವಾದ.
ವಿದೇಶ = ಪರದೇಶ.
ಶುಷ್ಕ = ಒಣಗಿದ.
೪. ವಿಭೂಷಣ = ಆಭರಣ.
ಹೃದ್ಯ = ಮನೋಹರ.
ಸಿತೋಪಲ = ಬಿಳೇ ಕಲ್ಲು
ಅಚ್ಚರಳೆ = ಉತ್ತಮವಾದ ಅರಳೆ.

ಶ್ವಾನ = ನಾಯಿ.

೫. ಸೆರೆ ... = ಚೆನ್ನಾಗಿ

೮. ಪ್ರಥಿತಂ = ಪ್ರಸಿದ್ಧಂ

೯. ಒಳ್ಳು ಮಣ್ಣಿನ ಪಾತ್ರೆ = ಉತ್ತಮವಾದ ಮಣ್ಣಿನ ಪಾತ್ರೆ.

ಅಸಿಗಳ್ ... = ಕತ್ತಿಗಳು.

ಪೊಳೆವಿಸುನಿ = ಹೊಳೆಯುವ ಬಂಗಾರ

೧೦. ಮೇಲಿಹರ್ = ಮೇಲಾಗಿರುವರು.

೧೧. ಸೂದ್ಯೋಗಿಗಳ್ = ಒಳ್ಳೇ ಉದ್ಯೋಗಿಗಳು.

ದಲ್ = ನಿಶ್ಚಯವಾಗಿ.

೧೨. ಉಳಿದರ್ = ಉಳಿದವರು.

೧೪. ತಿಮಿಗಳಂ = ಮೀನುಗಳನ್ನು.

ಸತ್ಖನಿಯೊಳ್ = ಒಳ್ಳೇ ಖನಿಯಲ್ಲಿ.

ಕ್ಷೇತ್ರಸ್ಥಕೃತ್ಯಂಗಳೊಳ್ = ಹೊಲದ ಕೆಲಸಗಳಲ್ಲಿ.

೧೫. ಸಂಣದು+ಇಹ = ಸಂಣದಿರುವ.

ಧೀಯುತರ್ = ಬುದ್ಧಿವಂತರು.

೧೬. ರನ್ನಗಳ್ = ರತ್ನಗಳು.

ಒಳುದಾಲಚಿನ್ನಿ = ಉತ್ತಮವಾದ ದಾಲಚಿನ್ನಿ.

ವೃಷ್ಟಿ = ಮಳೆ.

ವಲಂ = ನಿಶ್ಚಯವಾಗಿ.

೨ ನೆಯ ಪಾಠದ

( ಪದ್ಯಗಳ ಬಗ್ಗೆ. )

೧. ಆಂಗ್ಲದಿಂ = ಇಂಗ್ಲಂಡದಿಂದ.
೩. ಬಲುನ್ಯೂನಂ = ಬಹಳ ಕಡಿಮೆ.
ಇರದೆ = ಬಿಡದೆ.
ಪುಲ್ಲೇ = ಹುಲ್ಲೇ.
೪. ಸದ್ಧೀವಂತರುಂ = ಬಹಳೇ ಬುದ್ಧಿವಂತರು.
ಭೂಷಂಗಳು = ಆಭರಣಗಳು.
ಬಲವತ್ ಫ್ರಾನ್ಸ
ದೊಳ್ = ಬಲವುಳ್ಳ ಫ್ರಾನ್ಸದೇಶದಲ್ಲಿ.
೫. ಅಭಿಧಾನ = ಹೆಸರು.
೭. ಇಳೆ = ಭೂಮಿಯು.
ಮಿನುಗುಂ = ಇರುವವು.
೧೦. ವಾರಿಪರ್ಯಟನ
ದೊಳುಂ = ಸಮುದ್ರಸಂಚಾರದಲ್ಲಿಯೂ.
೧೧. ಸಮವು = ಸಮನೆಲವುಳ್ಳದ್ದು.
ಮೆರೆವ = ಒಪ್ಪುವ
೧೨. ಜಲಪರ್ಯಟನದೆ = ಸಮುದ್ರಸಂಚಾರದಲ್ಲಿ
ಪೊಲ್ವರ್ = ಹೊಂದುವರು.
೧೩. ಅನಿಶಂ = ಯಾವಾಗಲೂ.
ಉದ್ಯಮಕೆ = ಉದ್ಯೋಗಕ್ಕೆ.
ಸ್ವೀಡನ್‌ನಾರ್ವೆ
ದೇಶಸ್ಥರ = ಸ್ವೀಡನ್‌ನಾರ್ವೆ ದೇಶಗಳಲ್ಲಿ
ಇರುವ ಜನರ.

೧೪. ಎಸೆವೊಳ್ಗಟ್ಟಿಗೆ = ಶೋಭಿಸುವ ಉತ್ತಮವಾದ ಕಟ್ಟಿಗೆ.
ನಿಸದಂ = ಚನ್ನಾಗಿ.
೧೫. ಕಾಷ್ಠ = ಕಟ್ಟಿಗೆ,
ತಮಾಖು = ತಂಬಾಕು.
ದುಕೂಲವಸ್ತ್ರ = ರೇಶಿಮೆಯ ವಸ್ತ್ರ.
ಉದ್ಯಮ ಸರ್ವಕಲಾ ವಿಶಾರದರ್ = ಉದ್ಯೋಗದಲ್ಲಿಯೂ ಯಾವತ್ತು ಕಲಾಕೌಶಲ್ಯಗಳಲ್ಲಿಯೂ ನಿಪುಣರು
೧೬. ಅನುದಿನಂ = ಯಾವಾಗಲೂ.
ಶುಭ್ರೋಪಲ = ಬಿಳೇಕಲ್ಲು.
೧೭. ಗಾಯನಕಲೆಯೊಳ್ = ಗಾಯನ ವಿದ್ಯದಲ್ಲಿ.
೧೮. ಕೃಷಿಕರ್ಮಂ = ಒಕ್ಕಲತನವು.
ಗಡ ... = ಕಂಡಿಯಾ. (ಅವ್ಯಯ)
ನಡೆ ... = ಚೆನ್ನಾಗಿ.
ಕಾವ್ಯವಿಭೂಷಣಂಗಳೊಳ್ = ಕಾವ್ಯಗಳನ್ನು ರಚಿಸುವದರಲ್ಲಿಯೂ ಅಲಂಕಾರಗಳನ್ನು ಮಾಡುವದರಲ್ಲಿಯೂ.
ಶ್ರೇಷ್ಠತಮರ್ = ಬಹಳೇ ಹೆಚ್ಚಿನವರು.
೨೧. ಉಸುರ್ದಪರ್ = ಹೇಳುವರು.
ಎಂದುಂ = ಯಾವಾಗಲೂ.

## ೩ ನೆಯ ಪಾಠದ
## ( ಪದ್ಯಗಳ ಬಗ್ಗೆ. )

೧. ಗಜದಂತ = ಆನೆಯ ಹಲ್ಲು.
ಪೊಮ್ಮಂಣ್ಣು = ಬಂಗಾರದ ಮಂಣು.
೨. ಹಯುಗಳಂ = ಕುದುರೆಗಳನ್ನು.
೩. ಚೊಕ್ಕ = ಉತ್ತಮವಾದ.

## ೪ ನೆಯ ಪಾಠದ
## ( ಪದ್ಯಗಳ ಬಗ್ಗೆ. )

೧. ಉರುತರ = ಶ್ರೇಷ್ಠವಾದ.
೨. ಪೋಪುಪು = ಹೋಗುವವು.
೩. ವರಜನಸತ್ಪಾತ್ರಕಂ = ಶ್ರೇಷ್ಠವಾದ ಪ್ರಜಾಸತ್ಪಾತ್ರಕವುಳ್ಳ.
೪. ಅತಿಶಯದಿಂದಂ = ವಿಶೇಷವಾಗಿ.
೭. ಗ್ವಾನೊ = ಪೆರೂದೇಶದ ಪಶ್ಚಿಮದಲ್ಲಿದ್ದ ದ್ವೀಪಗಳಲ್ಲಿ ದೊರೆಯುವ ಹಕ್ಕಿಗಳ ಮಲವು.
ಚೊಕ್ಕಟಂ ಇಹ = ಉತ್ತಮವಾಗಿರುವ.
ಲೆಕ್ಕವಿಲ್ಲದನಿತ್ತು = ಲೆಕ್ಕವಿಲ್ಲದಷ್ಟು.
೮. ಕುಂದಿಲ್ಲದ = ಬೆಲೆಯುಳ್ಳ.
ಸಂದ = ಪ್ರಸಿದ್ಧವಾದ.
೯. ಹಣಗೊಟ್ಟು = ಹಣವನ್ನು ಕೊಟ್ಟು.
ಈಗಳುಂ = ಈಗಲೂ.
ಅಚ್ಚ = ಉತ್ತಮವಾದ.
ಅಸ್ಥಿ = ಎಲುವು.
ಅಂತೇವಾಸಿವರ್ಗಂ

ಗಳಂ – ಶಿಷ್ಯರವರ್ಗಗಳನ್ನು.

೫ ನೆಯ ಪಾಠದ

( ಪದ್ಯಗಳ ಬಗ್ಗೆ. )

೨. ಕವಿದು = ಮುತ್ತಿ.
ಜವದೆ = ಶೀಘ್ರವಾಗಿ.
ಪಂಚಷಷ್ಠಾಂಶ
ಪನು = ಐದುಆರಾಂಶವನ್ನು. ($\frac{5}{6}$).

೬ ನೆಯ ಪಾಠದ

( ಪದ್ಯಗಳಬಗ್ಗೆ. )

೨. ವಿನುತ = ಪ್ರಸಿದ್ಧವಾದ
೧೦. ರಾಜಿಪ = ಒಪ್ಪುವ.
೧೩. ಮಿಗೆ = ವಿಶೇಷವಾಗಿ.
೧೪. ಬಾಗದ = ಎತ್ತರವಾದ.
ಆಗಳುಂ = ಯಾವಾಗಲೂ.
ಇಂತು = ಈ ಪ್ರಕಾರ.
೧೬. ಭದ್ರಂಗಳ್ = ಗಟ್ಟಿಯಾದ.
೨೦. ತಕ್ಕುದು = ಯೋಗ್ಯವಾದ.
೨೧. ಅಣಿಯರದಿಂ = ವಿಶೇಷವಾಗಿ.
೨೭. ಸೋಲದ = ಯಾವತ್ತೂ ಪಟ್ಟಣಗಳಿಗಿಂ ಮಿಗಿಲಾದ.
೨೮. ತೇಜದ = ತೇಜ ವುಳ್ಳ.
೨೯. ಪುಸಿಯಲ್ಲ = ಸುಳ್ಳು ಅಲ್ಲಾ.
೩೦. ಮೇಳದೆ = ಮೇಳದಿಂದ, ಒಟ್ಟಾಗಿ.

೩೧. ಕಂಗನೆ = ವಿಶೇಷವಾಗಿ.

೩೩. ಸಾಜದೆ = ಸಹಜದಿಂದ.

ಮಾಜದೆ = ಮುಚ್ಚದೆ.

೩೪. ಶುಭ್ರೋತ್ತಮ = ಅತಿಶಯ ಬಿಳಿಯದಾದ.

೩೬. ಗೋಧೂಮ = ಗೋಧಿ.

ಮಾದೇವಂಗೆ = ಪರಮೇಶ್ವರನಿಗೆ ಅಥವಾ ವಿಷ್ಣುವಿಗೆ.

---

## ಗೋಷವಾರೆ.

| ಪಾಠಗಳು. | ಖಂಡಗಳು. | ಕವಿತೆಗಳ ಸಂಖ್ಯೆಗಳು. |
|---|---|---|
| ೧ ನೆಯ ಪಾಠ. | ಏಶಿಯಾ ಖಂಡ. | ೧೪ |
| ೨ ನೆಯ ಪಾಠ. | ಯುರೋಪ ಖಂಡ | ೨೧ |
| ೩ ನೆಯ ಪಾಠ. | ಆಫ್ರಿಕಾ ಖಂಡ. | ೫ |
| ೪ ನೆಯ ಪಾಠ. | ಅಮೇರಿಕಾ ಖಂಡ. | ೯ |
| ೫ ನೆಯ ಪಾಠ. | ಓಶಿಯಾನಿಯಾ. | ೩ |
| ೬ ನೆಯ ಪಾಠ. | ಹಿಂದುಸ್ತಾನ ದೇಶ. | ೩೬ |
| | ಅಂತು. | ೯೧ |

ಶ್ರೀ ವಿರೂಪಾಕ್ಷಲಿಂಗ ಪ್ರಸನ್ನಃ

# ಛಂದಃ ಸಾರ ಮಣಿದೀಪಿಕೆ.

---

## ೧ ನೆಯ ಪಾಠ.

೧. ಪಶ್ನ.—ಮಾತ್ರೆ ಅಂದರೇನು ?

ಉತ್ತರ.—ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸಲಿಕ್ಕೆ ಬೇಕಾಗುವ ವೇಳೆಯ ಪರಿಮಾಣಕ್ಕೆ ಮಾತ್ರೆಯೆನ್ನುತ್ತಾರೆ. ಮಾತ್ರೆಗೆ ಕಲೆಯೆಂತಲೂ ಅನ್ನುವರು.

೨. ಪ್ರಶ್ನ.—ಲಘು ಮತ್ತು ಗುರು ಅಂದರೇನು ?

ಉತ್ತರ.—ಛಂದಃ ಶಾಸ್ತ್ರದಲ್ಲಿ ಹ್ರಸ್ವಾಕ್ಷರಕ್ಕೆ ಲಘುವೆಂತಲೂ, ದೀರ್ಘಾಕ್ಷರಕ್ಕೆ ಗುರುವೆಂತಲೂ ಹೆಸರುಂಟು.

೩. ಪ್ರಶ್ನ.—ಲಘುವಿಗೆ ಗುರುತ್ವವು ಎಲ್ಲೆಲ್ಲಿ ಬರುತ್ತದೆ ?

ಉತ್ತರ.—(अ) ಲಘುವಿನ ಮುಂದೆ ಅನುಸ್ವಾರ, ವಿಸರ್ಗ, ಸಂಯುಕ್ತಾಕ್ಷರ, ವ್ಯಂಜನ ಇವುಗಳಲ್ಲಿ ಯಾವದಾದರೂ ಒಂದು ಇದ್ದರೆ ಆ ಲಘುವಿಗೆ ಗುರುತ್ವವು ಬರುತ್ತದೆ.

(ब) ಪಾದಾಂತ್ಯದಲ್ಲಿರುವ ಲಘುವರ್ಣವು ಆವಶ್ಯ ವಿದ್ದಲ್ಲಿ ಗುರು ವಾಗುತ್ತದೆ.

(क) ಪದ್ಯದ ಕಡೆಯ ಲಘುವಿಗೂ, ಪದ್ಯಾರ್ಧದ ಕಡೆಯ ಲಘುವಿಗೂ ನಿತ್ಯವಾಗಿ ಗುರುತ್ವವು ಬರುತ್ತದೆ

೪. ಪ್ರಶ್ನ.—ಹ್ರಸ್ವ, ದೀರ್ಘಾಕ್ಷರಗಳಿಗೆ ಮಾತ್ರೆಗಳೆಷ್ಟು?
ಉತ್ತರ.—ಹ್ರಸ್ವಾಕ್ಷರಕ್ಕೆ ಒಂದು ಮಾತ್ರೆಯೂ, ದೀರ್ಘಾಕ್ಷರಕ್ಕೆ ಎರಡು ಮಾತ್ರೆಗಳೂ ಉಂಟು. ಹ್ರಸ್ವಾಕ್ಷರಕ್ಕೆ ಗುರುತ್ವವು ಬಂದಲ್ಲಿ ಅದಕ್ಕೆ ಎರಡು ಮಾತ್ರೆಗಳನ್ನು ಹಿಡಿಯಬೇಕು.

೫. ಪ್ರಶ್ನ.—ಲಘು ಗುರು ಅಕ್ಷರಗಳನ್ನು ಬರೆದು ತೋರಿಸುವ ಚಿಹ್ನಗಳು ಯಾವವು?

ಉತ್ತರ.—ಲಘು ಅಕ್ಷರಗಳನ್ನು ಬರೆದು ತೋರಿಸಕ್ಕೆ ᑌ ಈ ಅರ್ಧಚಂದ್ರಾಕೃತಿಯ ಚಿಹ್ನವನ್ನೂ, ಗುರು ಅಕ್ಷರವನ್ನು ಬರೆದು ತೋರಿಸಲಿಕ್ಕೆ — ಈ ಸಂಣ ಸರಳರೇಖಾ ಚಿಹ್ನವನ್ನೂ ಗೊತ್ತು ಮಾಡಿದ್ದಾರೆ. ಅದರಿಂದ ᑌ ಈ ಚಿಹ್ನವು ಒಂದು ಮಾತ್ರೆಯನ್ನೂ, — ಈ ಚಿಹ್ನವು ಎರಡು ಮಾತ್ರೆಗಳನ್ನೂ ತೋರಿಸುತ್ತದೆ.

೬ ಪ್ರಶ್ನ.—ಪ್ರಸ್ತಾರ ವೆಂದರೇನು?
ಉತ್ತರ.—ಪೂರಾ ಪದ್ಯದಲ್ಲಿ ಅಥವಾ ಅದರ ಕೆಲವೊಂದು ಭಾಗದಲ್ಲಿ ಇರುವ ಗುರು ಲಘು ವರ್ಣಗಳನ್ನು ಅವುಗಳ ಚಿಹ್ನಗಳಿಂದ ಬರೆದು ತೋರಿಸುವದಕ್ಕೆ ಪ್ರಸ್ತಾರವೆಂಬ ಹೆಸರು.

## ೨ ನೆಯ ಪಾಠ.

೧. ಪ್ರಶ್ನ.—ಗಣವೆಂದರೇನು?

ಉತ್ತರ.-ಎರಡು ಇಲ್ಲವೆ ಮೂರು ಇಲ್ಲವೆ ನಾಲ್ಕು ಅಥವಾ ಐದು ಅಕ್ಷರಗಳ ಸಾಲಿಗೆ ಗಣವೆಂಬ ಹೆಸರು

೮. ಪ್ರಶ್ನ.—ಗಣಗಳು ಎಷ್ಟು ಪ್ರಕಾರದವು? ಯಾವವು?

ಉತ್ತರ-ಗಣಗಳು ಎರಡು ಪ್ರಕಾರವು. ಅವಾವವೆಂದರೆ ಅಕ್ಷರ ಗಣಗಳು, ಮಾತ್ರಾಗಣಗಳು.

೯. ಪ್ರಶ್ನ.--ಅಕ್ಷರಗಣಗಳು ಯಾವವು? ಅವುಎಷ್ಟು? ಅವುಗಳನ್ನು ತಿಳಿದುಕೊಳ್ಳುವಬಗೆ ಹೇಗೆ?

ಉತ್ತರ.-ಮಗಣ, ಯಗಣ, ರಗಣ, ಸಗಣ, ತಗಣ, ಜಗಣ, ಭಗಣ, ನಗಣ ಎಂದು ಅಕರಗಣಗಳು ಎಂಟು ಉಂಟು.

## ಕಂದ ಪದ್ಯಂ.

ಗುರು ಲಘು ಮೂರಿರೆ ಮನಗಣ ।
ಗುರು ಲಘು ಮೊದಲಲ್ಲಿ ಬರಲು ಭಯುಗಣಮತ್ತಾ ॥
ಗುರು ಲಘು ನಡುವಿರೆ ಜರಗಣ ।
ಗುರು ಲಘು ಕಡೆಯಲ್ಲಿ ಬರಲು ಸತಗಣ ಮಕ್ಕುಂ ॥

ಭಾವಾರ್ಥ--ಮೂರು ಅಕ್ಷರಗಳಲ್ಲಿ ಮೂರೂ ಗುರು ಅಕ್ಷರಗಳಿದ್ದರೆ ಮಗಣವು, ಮೂರೂ ಲಘು ಅಕ್ಷರಗಳಿದ್ದರೆ ನಗಣವು, ಮೊದಲಕ್ಷರವು ಗುರುವಾದರೆ ಭಗಣವು, ಮೊದಲಕ್ಷರವು ಲಘುವಾದರೆ ಯಗಣವು, ನಡುವಿನ ಅಕ್ಷರವು ಗುರುವಾದರೆ ಜಗಣವು, ನಡುವಿನ ಅಕ್ಷರವು ಲಘುವಾದರೆ ರಗಣವು, ಕಡೆಯ ಅಕ್ಷರವು ಗುರುವಾದರೆ ಸಗಣವು, ಕಡೆಯಕ್ಷರವು ಲಘುವಾದರೆ ತಗಣವು ಆಗುವದು.

ಉದಾಹರಣಗಳು:

ಮಗಣಕ್ಕೆ— ಮಾಕಾಂತಂ, ಲಕ್ಷ್ಮೀಶಂ.
ನಗಣಕ್ಕೆ —ಮನುಜ, ಕನಕ.
ಭಗಣಕ್ಕೆ—ಚಂದ್ರಮ, ಶಂತನು
ಯಗಣಕ್ಕೆ—ಕಬಂಧಂ, ಪಿನಾಕಂ.
ಜಗಣಕ್ಕೆ —ದಿನೇಶ, ವಿಚಾರ.
ರಗಣಕ್ಕೆ—ಪಾವಕಂ, ರಾಜಿಪಂ.
ಸಗಣಕ್ಕೆ—ಪವನಂ, ಹನನಂ
ತಗಣಕ್ಕೆ—ಆಕಾಶ, ಭೂನಾಥ

## ೭ ನೆಯ ಪಾಠ.

೧೦. ಪ್ರಶ್ನ.—ಪ್ರಾಸ ವೆಂದರೇನು?

ಉತ್ತರ.—ಪ್ರಥಮ ಚರಣದ ಎರಡನೆಯ ವರ್ಣವು ಯಾವದಿದ್ದರೂ ಚಿಂತೆಇಲ್ಲ. ಅದರ ಮುಂದಿನ ಎಲ್ಲಾ ಚರಣಗಳ ಎರಡನೆಯ ಅಕ್ಷರಗಳು ಮೊದಲನೆಯ ಚರಣದ ಎರಡನೆಯ ಅಕ್ಷರದ ಬಳ್ಳಿಯೊಳಗಿನವೇ ಇದ್ದರೆ ಅವಕ್ಕೆ ಪ್ರಾಸಾಕ್ಷರಗಳೆಂಬ ಹೆಸರು.

೧೧. ಪ್ರಶ್ನ—ಯತಿ ಯೆಂದರೇನು?

ಉತ್ತರ-ಪದ್ಯಗಳನ್ನು ಒಂದೇ ಉಸುರಿನಿಂದ ಅನ್ನುವದು ಅಸಾಧ್ಯವಾದ ಕಾರಣ ನಡುವೆ ಸ್ವರವನು ನಿಲ್ಲಿಸಬೇಕಾಗುತ್ತದೆ ಈ ಸ್ವರವನ್ನು ನಿಲ್ಲಿಸೋಣಕ್ಕೆ ಯತಿ ಯನ್ನುತ್ತಾರೆ.

೧೨. ಪ್ರಶ್ನೆ—ಕಂದಪದ್ಯದ ನಿಯಮ ವೇನು ?

ಉತ್ತರ-ಕಂದ ಪದ್ಯಕ್ಕೆ ನಾಲ್ಕು ಚರಣಗಳು. ಅವುಗಳಲ್ಲಿ ಮೊದಲನೆಯ ಮೂರನೆಯ ಚರಣಗಳೂ ಎರಡನೆಯ ನಾಲ್ಕನೆಯ ಚರಣಗಳೂ ಸಮಾನವಿರುತ್ತವೆ. ಮೊದಲನೆಯ ಎರಡನೆಯ ಚರಣಗಳಿಗೆ ಕೂಡಿ ಪೂರ್ವಕಂದಾರ್ಧವೆಂತಲೂ, ಮೂರನೆಯ ನಾಲ್ಕನೆಯ ಚರಣಗಳಿಗೆ ಕೂಡಿ ಉತ್ತರಕಂದಾರ್ಧವೆಂತಲೂ ಹೆಸರು. ಪೂರ್ವ ಕಂದಾರ್ಧದ ಲಕ್ಷಣವೂ, ಉತ್ತರ ಕಂದಾರ್ಧದ ಲಕ್ಷಣವೂ ಒಂದೇ ಇರುವದು. ಮೊದಲನೆಯ ಚರಣಕ್ಕೆ ನಾಲ್ಕ ನಾಲ್ಕುಮಾತ್ರೆಯ ಮೂರು ಗಣಗಳೂ, ಎರಡನೆಯ ಚರಣಕ್ಕೆ ನಾಲ್ಕು ನಾಲ್ಕು ಮಾತ್ರೆಯ ಐದು ಗಣಗಳೂ ಇರುತ್ತವೆ. ಕಂದಾರ್ಧಕ್ಕೆ ಒಟ್ಟಿಗೆ ನಾಲ್ಕು ನಾಲ್ಕು ಮಾತ್ರೆಯ ಎಂಟು ಗಣಗಳಿರಬೇಕೆಂಬ ತಾತ್ಪರ್ಯವು. ಈ ಎಂಟು ಗಣಗಳಲ್ಲಿ ಪ್ರತಿ ವಿಷಮಸ್ಥಾನದಲ್ಲಿ ಜಗಣ ವಿರಬಾರದು. ಅದು ಆರನೆಯ ಸ್ಥಾನದಲ್ಲಿ ಇರಬೇಕು. ಅಥವಾ ಆರನೆಯ ಸ್ಥಾನದಲ್ಲಿ ನಗಣ ವಿರಬೇಕು. ಮತ್ತೆಯಾವದೂ ಇರಬಾರದು ಎಂಟನೆಯ ಗಣದ ಅಂತ್ಯ ವರ್ಣವು ಗುರುವಾಗಲೀ, ಗುರುತ್ವವನ್ನು ಹೊಂದತಕ್ಕ ವರ್ಣವಾಗಲೀ ಇರಬೇಕು. ಇದೇ ನಿಯಮದಂತೆ ಉತ್ತರ ಕಂದಾರ್ಧವೂ ಇದ್ದರೆ ಇಡೀ ಒಂದು ಕಂದಪದ್ಯ ವಾಗುತ್ತದೆ.

# ೪ ನೆಯ ಪಾಠ.

೧೩ ಪ್ರಶ್ನ—ಷಟ್ಪದಿಗಳಾವವು ಎಷ್ಟು ?

ಉತ್ತರ-ಶರಷಟ್ಪದಿ, ಕುಸುಮ ಷಟ್ಪದಿ, ಭೋಗಷಟ್ಪದಿ, ಭಾಮಿನಿ ಷಟ್ಪದಿ, ಪರಿವರ್ಧಿನಿ ಷಟ್ಪದಿ, ವಾರ್ಧಿಕ ಷಟ್ಪದಿ ಎಂದು ಆರು ಷಟ್ಪದಿಗಳಿವೆ.

೧೪. ಪ್ರಶ್ನ ಷಟ್ಪದಿಗಳ ಚರಣಗಳೆಷ್ಟು? ಷಟ್ಪದಿವೃತ್ತದ ಸಾಮಾನ್ಯ ನಿಯಮವೇನು ?

ಉತ್ತರ.-ಷಟ್ಪದಿವೃತ್ತಗಳಿಗೆ ಆರು ಚರಣಗಳು. ಅವುಗಲ್ಲಿ ನಾಲ್ಕು ಸಣ್ಣವು, ಎರಡು ದೊಡ್ಡವು. ಮೊದಲು ಎರಡು ಸರಿಯಾದ ಸಣ್ಣ ಚರಣಗಳಿರುತ್ತವೆ. ಮೂರನೆಯ ಚರಣವು ದೊಡ್ಡದಿರತ್ತದೆ. ಇಂಥ ಮೂರು ಚರಣಗಳಿಂದ ಒಂದು ಅರ್ಧ ವೃತ್ತವಾಗುತ್ತದೆ ಸಣ್ಣ ಚರಣದ ಒಂದೂವರೆ ಪಾಲುಗಣಗಳೂ ಒಂದು ಗುರುವೂ ಕೂಡಿದರೆ ದೊಡ್ಡ ಚರಣವಾಗುತ್ತವೆ. ಷಟ್ಪದಿಗಳಲ್ಲಿ ಪ್ರತಿಯೊಂದು ಗಣದಾರಂಭಕ್ಕೆ ಜ ಗಣ ಯ ಗಣಗಳೂ ಇವುಗಳ (ᑌ –) ಈ ಅವಯವವೂ ಇರಬಾರದು ಇದ್ದರೆ ಷಟ್ಪದಿಗಳು ತಪ್ಪುತ್ತವೆ ಈ ವೃತ್ತಗಳ ಪೂರ್ವೋತ್ತರಾರ್ಧಗಳ ಕಡೆಯಲ್ಲಿ ವ್ಯಂಜನಗಳಿರಬಾರದು. ಏಕೆಂದರೆ ವ್ಯಂಜನಗಳಿದ್ದರೆ ಸ್ವರವನ್ನು ಎಳೆಯುವಿಕ್ಕೆ ವಿಘ್ನವಾಗುತ್ತದೆ.

೧೫ ಪ್ರಶ್ನ—ಆರು ಷಟ್ಪದಿವೃತ್ತಗಳ ಲಕ್ಷಣವು ಹೇಗೆ?

ಉತ್ತರ- ಕಂದಪದ್ಯ.

ಶರಕುಸುಮ ಭೋಗ ಭಾಮಿನಿ
ಪರಿವರ್ಧಿನಿ ವಾರ್ಧಿಕಂಗಳೆಂಬಾರು ತೆರಂ
ಕರಿದಶರವಿಮನು ರಾಜರ್
ಬರೆವಿಂಶತಿ ಮಾತ್ರೆಯಿಂದೆ ಷಟ್ಪದಿನಡೆಗುಂ ॥

ಕರಿಯೆಂದರೆ ಎಂಟು, ದಶವೆಂದರೆಹತ್ತು, ರವಿಯೆಂದರೆ ಹನ್ನೆರಡು, ಮನು ವೆಂದರೆ ಹದಿನಾಲ್ಕು, ರಾಜ ವೆಂದರೆ ಹದಿನಾರು, ವಿಂಶತಿಯೆಂದರೆ ಇಪ್ಪತ್ತು.

ಭಾವಾರ್ಥ— ಈ ಕವಿತೆಯು ಕ್ರಮಾಲಂಕಾರವುಳ್ಳದ್ದು. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕ ಈ ಆರು ಷಟ್ಪದಿವೃತ್ತಗಳ ಮೊದಲನೆಯ ಚರಣಗಳು ಅನುಕ್ರಮವಾಗಿ ಎಂಟು, ಹತ್ತು, ಹನ್ನೆರಡು, ಹದಿನಾಲ್ಕು. ಹದಿನಾರು, ಇಪ್ಪತ್ತು ಮಾತ್ರೆಗಳುಳ್ಳವು ಇರಬೇಕು. ಎರಡನೆಯ ಚರಣಗಳಾದರೂ ಇದೇಪ್ರಕಾರವೇ. ಮೊದಲನೆಯ ಚರಣದ ಒಂದೂವರೆ ಪಾಲು ಮಾತ್ರೆಗಳೂ ಒಂದು ಗುರುವೂ ಕೂಡಿದರೆ ಆಯಾ ಷಟ್ಪದಿಯ ಮೂರನೆಯ ಚರಣವಾಗುತ್ತದೆ. ಇಂಥವು ಮುಂದೆ ಮೂರು ಚರಣಗಳಿದ್ದರೆ ಆಯಾ ಹೆಸರಿನ ಒಂದು ಷಟ್ಪದಿವೃತ್ತವು ಪೂರ್ಣವಾಗುತ್ತದೆ. ಮತ್ತು ಈ ಪದ್ಯದಿಂದ ೧೮ ಮಾತ್ರೆಗಳ ಸಣ್ಣ ಚರಣಗಳೂ, ೨೯ ಮಾತ್ರೆಗಳ ದೊಡ್ಡ ಚರಣಗಳೂ ಇರುವ ಬೇರೆ ಒಂದು ಷಟ್ಪದಿಯು ಇರಬೇಕೆಂದು ಭಾಸವಾಗುತ್ತದೆ.

## ೫ ನೆಯ ಪಾಠ.

### ಅಕ್ಷರಗಣ ವೃತ್ತ ಲಕ್ಷಣಂ

೧೬. ಪ್ರಶ್ನ -ವಂಶಸ್ಥವೃತ್ತದ ನಿಯಮವನ್ನೂ ಪ್ರಸ್ತಾರವನ್ನೂ, ಬರೆ ?

ಉತ್ತರ–ಬರಲ್ಕೆ ವಂಶಸ್ಥಪದಂ ಜತಂ ಜರಂ ॥ ೧ ॥

ಪ್ರಸ್ತಾರಂ | ⏑ – ⏑ | – – ⏑ | ⏑ – ⏑ | – ⏑ –

೧೭. ಪ್ರಶ್ನೆ–ವಸಂತತಿಲಕ ವೃತ್ತದ ನಿಯಮುವನ್ನೂ ಪ್ರಸ್ತಾರ ವನ್ನೂ ಬರೆ?

ಉತ್ತರ–ಉಕ್ತಂವಸಂತತಿಲಕಂತಭಜಂಜಗಂಗಂ ॥೨॥

ಪ್ರಸ್ತಾರಂ | – – ⏑ | – ⏑ ⏑ | ⏑ – ⏑ | ⏑ – ⏑ | – – |

೧೮. ಪ್ರಶ್ನೆ—ಮಾಲಿನೀವೃತ್ತದ ನಿಯಮುವನ್ನೂ ಪ್ರಸ್ತಾರ ವನ್ನೂ ಬರೆ?

ಉತ್ತರ–ಪಸುಯತಿನಯುಗಂಮಂ ಯದ್ವಯಂ ಮಾಲಿ ನೀಕಂ ॥ ೩ ॥

ಪ್ರಸ್ತಾರಂ | ⏑ ⏑ ⏑ | ⏑ ⏑ ⏑ | – – – | ⏑ – – | ⏑ – – |

೧೯. ಪ್ರಶ್ನೆ–ಶಾರ್ದೂಲ ವಿಕ್ರೀಡಿತ ವೃತ್ತದ ನಿಯುಮವನ್ನೂ ಪ್ರಸ್ತಾರವನ್ನೂ ಬರೆ?

ಉತ್ತರ–ಅರ್ಕಚ್ಛೇದದೆ ಮಂಸಜಂಸತತಗಂ ಶಾರ್ದೂ ಲ ವಿಕ್ರೀಡಿತಂ ॥ ೪ ॥

ಪ್ರಸ್ತಾರಂ | – – – | ⏑ ⏑ – | ⏑ – ⏑ | ⏑ ⏑ – | – – ⏑ | – – ⏑ | –

೨೦. ಪ್ರಶ್ನೆ—ಮತ್ತೇಭವಿಕ್ರೀಡಿತ ವೃತ್ತದ ನಿಯುಮವನ್ನೂ ಪ್ರಸ್ತಾರವನ್ನೂ ಬರೆ?

ಉತ್ತರ–ಯತಿಹಸ್ತಕ್ಕೆ ಸಭಂರನಂ ಮಯುಲಗಂ ಮ ತ್ತೇಭ ವಿಕ್ರೀಡಿತಂ ॥ ೫ ॥

ಪ್ರಸ್ತಾರಂ | ⏑ ⏑ – | – ⏑ ⏑ | – ⏑ – | ⏑ ⏑ ⏑ | – – – | ⏑ – – | ⏑ – |

೨೧. ಪ್ರಶ್ನೆ–ಉತ್ಪಲಮಾಲಾವೃತ್ತದ ನಿಯುಮವನ್ನೂ ಪ್ರಸ್ತಾ ವನ್ನೂ ಬರೆ?

ಉತ್ತರ–ಉತ್ಪಲಮಾಲೆಭಂ ರನಭಭಂ ರಲಗಂ ನವಮಂ ವಿರಾಮಕಂ ॥ ೬ ॥

ಪ್ರಸ್ತಾರಂ |-ᑌᑌ|-ᑌ-|ᑌᑌᑌ|-ᑌᑌ|-ᑌᑌ|
-ᑌ-|ᑌ-|

೨೨. ಪ್ರಶ್ನೆ—ಸ್ರಗ್ಧರಾ ವೃತ್ತದ ನಿಯಮವನ್ನೂ ಪ್ರಸ್ತಾರವನ್ನೂ ಬರೆ?

ಉತ್ತರ—ಏಳೇಳಕ್ಕಂ ವಿರಾಮಂ ಮರಭನಯುಗಳಿಂ ಯದ್ವಯಂ ಸ್ರಗ್ಧರಾಖ್ಯಂ ‖ ೭ ‖

ಪ್ರಸ್ತಾರಂ |---|-ᑌ-|-ᑌᑌ|ᑌᑌᑌ|ᑌ--|
ᑌ--|ᑌ--|

೨೩. ಪ್ರಶ್ನೆ—ಚಂಪಕಮಾಲಾ ವೃತ್ತದ ನಿಯಮವನ್ನೂ ಪ್ರಸ್ತಾರವನ್ನೂ ಬರೆ?

ಉತ್ತರ—ಯತಿಪದಿ ಮೂರರಿಂ ನಜಭಜಜರಯುರಂಗಳಿ ಚಂಪಕಸ್ರಜಂ ‖ ೮ ‖

ಪ್ರಸ್ತಾರಂ |ᑌᑌᑌ|ᑌ-ᑌ|-ᑌᑌ|ᑌ-ᑌ|ᑌ-ᑌ
ᑌ-ᑌ|-ᑌ-|

೨೪. ಪ್ರಶ್ನೆ—ಮಹಾಸ್ರಗ್ಧರಾವೃತ್ತದ ನಿಯಮವನ್ನೂ ಪ್ರಸ್ತಾರವನ್ನೂ ಬರೆ?

ಉತ್ತರ— ಪದಿನೈದಕ್ಕಂವಿರಾಮಂ ಸತತನಸರರಂಗಂಮಹಾಸ್ರಗ್ಧರಾಖ್ಯಂ ‖ ೯ ‖

ಪ್ರಸ್ತಾರಂ |ᑌᑌ-|--ᑌ|--ᑌ|ᑌᑌᑌ|ᑌᑌ-
|-ᑌ-|-ᑌ-|-|

೨೫. ಪ್ರಶ್ನೆ—ಶಿಖರಣೀ ವೃತ್ತದ ನಿಯಮವನ್ನೂ ಪ್ರಸ್ತಾರವನ್ನು ಬರೆ?

ಉತ್ತರ-ವಿರಾಮಂ ಷಷ್ಠಸ್ಥಂಯಮನಸಭಲಂಗಂ ಶಿಖರಣೀ ‖ ೧೦ ‖

ಪ್ರಸ್ತಾರಂ |ᑌ--|---|ᑌᑌᑌ|ᑌᑌ-|-ᑌᑌ
|ᑌ-|

**ಇತಿ ಸಮಾಪ್ತಂ.**

## ಶ್ರೀಮನ್ಮಹಾರಾಜ ಪಂಚಮ ಜಾರ್ಜ ದೊರೆಗಳವರ ಸ್ತುತಿಪರ ಪದಗಳು.



ವಾರಿನಿಧಿ ಶಯನಾ ಕರುಣಿಸು ಜಾರ್ಜಧರಣಿಪನಾ।
ಊರ್ವಿಯೊಳ್ ಬಲುಧೀರ ನೆನಿಸುವ ಶೂರ ನೃಪವರನಾ ॥೧॥
ಕೀರ್ತಿಯಂಬಡೆದು ಕರುಣಾಮೂರ್ತಿಯೆನಿಸುವನಾ।
ಸಾರ್ವಭೌಮರೊಳ್ ಮೀರಿಮೆರೆಯುವ ಆಂಗ್ಲ ಧರಣಿಪನಾ ॥೨॥
ದೇಶಬಾಂಧವರಾ ಮನಸಿನ ಆಶೆ ಪೂರಿಪನಾ।
ತೋಷದಿಂ ಗುಣಯುಕ್ತ ಮೇರಿಯುಪ್ರಾಣವಲ್ಲಭನಾ ॥ ೩ ॥

ಜಯ ಜಯ ಜಯ.

